

ಭಾಗವತಾಂತರ್ಗತ

# ನಾರಾಯಣವರ್ಮ

[ಅರ್ಥಾನುವಾದ, ವಿವರಣೆ, ವಿಶ್ಲೇಷಣೆಗಳೊಂದಿಗೆ]

ಮತ್ತು

# ಹತ್ತು ಕವಚಸ್ತೋತ್ರಗಳು

[ಸ್ಥೂಲಮಾಹಿತಿ ವಿವರಣೆಗಳೊಂದಿಗೆ]

ಸಗ್ರಿ ರಾಘವೇಂದ್ರ ಉಪಾಧ್ಯಾಯ



# ವಿದ್ಯೋಪದೇಶ ಸ್ವೀಕಾರಕ್ಕೆ ತೊಡಗುವ ಸಾಧಕರಿಗೆ ಕಿವಿಮಾತು

ಗುರುಶಿಷ್ಯಯೋರಯೋಗ್ಯತ್ವಾದ್ ಗುರುವೃತ್ತೇರಪೂರ್ತಿತಃ ।
ಅಪ್ರಸಾದಾದ್ ಗುರೋರ್ವಿದ್ಯಾ ನ ಯಥೋಕ್ತಫಲಪ್ರದಾಃ ॥

ವಿದ್ಯೋಪದೇಶ ನೀಡುವ ಗುರು ಹಾಗೂ ವಿದ್ಯೋಪದೇಶ ಸ್ವೀಕರಿಸುವ ಶಿಷ್ಯ ಇಬ್ಬರೂ ಅಯೋಗ್ಯರಾಗಿದ್ದಲ್ಲಿ, ಅಥವಾ ಗುರುವೋ ಶಿಷ್ಯನೋ ಅಯೋಗ್ಯನಾಗಿದ್ದಲ್ಲಿ, ಗುರುವಿನ ಶುಶ್ರೂಷೆಯನ್ನು ಪೂರ್ಣವಾಗಿ ನೆರವೇರಿಸದೆಯೇ ವಿದ್ಯೋಪದೇಶ ಪಡೆದುಕೊಂಡಿದ್ದಲ್ಲಿ–ಅಂತಹ ವಿದ್ಯೆ ಆ ಶಿಷ್ಯನ ಪಾಲಿಗೆ ಶಾಸ್ತ್ರ ತಿಳಿಸುವಷ್ಟು ಫಲಪ್ರದವಾಗಲಾರದು.

ಭಾಗವತದ 'ನಾರಾಯಣವರ್ಮ' ವಿದ್ಯೆಯ ಪ್ರಸ್ತಾವದಲ್ಲಿ ಶ್ರೀಮಧ್ವಾಚಾರ್ಯರು ತಮ್ಮ ಭಾಗವತ ತಾತ್ಪರ್ಯ ನಿರ್ಣಯದಲ್ಲಿ ಉಲ್ಲೇಖಿಸಿರುವ ಈ ಪ್ರಮಾಣವು ವಿದ್ಯೋಪದೇಶದ ಸ್ವೀಕಾರಕ್ಕೆ ತೊಡಗುವ ಸಾಧಕನು ಆದಷ್ಟು ಯೋಗ್ಯ ಗುರುಗಳ ಮೂಲಕ, ಅವರ ಸೇವೆಯನ್ನು ಚೆನ್ನಾಗಿ ಮಾಡಿ, ಅವರು ಪ್ರಸನ್ನರಾಗಿರುವ ಸಂದರ್ಭದಲ್ಲಿ ವಿದ್ಯೆಯ ಉಪದೇಶವನ್ನು ಪಡೆದುಕೊಳ್ಳಬೇಕು. ತನ್ನಲ್ಲೂ ಉಪದೇಶ ಸ್ವೀಕಾರಕ್ಕೆ ಬೇಕಾದ ಯೋಗ್ಯತೆ ಸಿದ್ಧಿಸುವಂತೆ ಅರ್ಹತೆಗಳನ್ನು ಅಳವಡಿಸಿಕೊಳ್ಳಬೇಕು–ಎಂದು ಎಚ್ಚರಿಸುತ್ತಿದೆ.

....●....

ಭಾಗವತಾಂತರ್ಗತ

# ನಾರಾಯಣವರ್ಮ

[ಅರ್ಥಾನುವಾದ, ವಿವರಣೆ, ವಿಶ್ಲೇಷಣೆ, ಜಿಜ್ಞಾಸೆಗಳೊಂದಿಗೆ]

ಮತ್ತು

# ಹತ್ತು ಕವಚಸ್ತೋತ್ರಗಳು

[ಸ್ಥೂಲ ಮಾಹಿತಿ ವಿವರಣೆಗಳೊಂದಿಗೆ]



ಸಗ್ರಿ ರಾಘವೇಂದ್ರ ಉಪಾಧ್ಯಾಯ





**ಭಾಗವತಾಂತರ್ಗತ 'ನಾರಾಯಣವರ್ಮ'**

**ಮತ್ತು**

**ಹತ್ತು ಕವಚ ಸ್ತೋತ್ರಗಳು**

ದ್ವಿತೀಯ ಮುದ್ರಣ : **21—8—1998**

ಪ್ರಕಾಶನ : **ಪರವಿದ್ಯಾಪ್ರಕಾಶನ**
ಶಮ್ಯಾಪ್ರಾಸ
ಮೂಡುಸಗ್ರಿ
ಉಡುಪಿ—576 102

ಬೆಲೆ : **೨೫-೦೦ ರೂ.**

ಮುದ್ರಣ : **ಸುಗುಣಾ ಪ್ರಿಂಟರ್ಸ್**
ಶ್ರೀ ಪುತ್ತಿಗೆ ಮಠ
ರಥಬೀದಿ
ಉಡುಪಿ—576 101

# ವಿಷಯಾನುಕ್ರಮಣಿಕೆ



x x x x

# ಸಂಕೇತಾಕ್ಷರಗಳ ವಿವರ

| | | |
|---|---|---|
| ಅ. ವ್ಯಾ. | : | ಅನುವ್ಯಾಖ್ಯಾನ |
| ಈ. ಉ. ಭಾ. | : | ಈಶಾವಾಸ್ಯೋಪನಿಷದ್ಭಾಷ್ಯ |
| ಐ. ಉ. ಭಾ. | : | ಐತರೇಯೋಪನಿಷದ್ಭಾಷ್ಯ |
| ಋ. ವೇ. | : | ಋಗ್ವೇದ |
| ತೈ. ಉ. ಭಾ. | : | ತೈತ್ತಿರೀಯೋಪನಿಷದ್ಭಾಷ್ಯ |
| ಗ. ಪು. | : | ಗರುಡ ಪುರಾಣ |
| ಗೀ. | : | ಭಗವದ್ಗೀತಾ |
| ಗೀ. ತಾ. | : | ಗೀತಾತಾತ್ಪರ್ಯ |
| ಚಿಟ್ಟೀ | : | ಚಿಟ್ಟೀ ವೆಂಕಟಾದ್ರಿರಚಿತಾ ಭಾಗವತ ಟಿಪ್ಪಣೀ |
| ಛಾಂ. ಉ ಭಾ. | : | ಛಾಂದೋಗ್ಯೋಪನಿಷದ್ಭಾಷ್ಯ |
| ತ. ಪ್ರ. | : | ತತ್ವಪ್ರಕಾಶಿಕಾ |
| ಕಾ. ಉ. ಭಾ. | : | ಕಾಠಕ ಉಪನಿನಿಷತ್ ಭಾಷ್ಯ |
| ತಂ. ಸಾ. ಸಂ. | : | ತಂತ್ರಸಾರ ಸಂಗ್ರಹ |
| ಬ. ಗೋ. | : | ಬನ್ನಂಜೆ ಗೋವಿಂದಾಚಾರ್ಯ |
| ಬೃ. ಉ. ಭಾ. | : | ಬೃಹದಾರಣ್ಯಕೋಪನಿಷದ್ಭಾಷ್ಯ |
| ಬ್ರ. ಸೂ. | : | ಬ್ರಹ್ಮಸೂತ್ರ |
| ಭಾಗ. | : | ಭಾಗವತ |
| ಭಾಗ. ತಾ. ನಿ. | : | ಭಾಗವತ ತಾತ್ಪರ್ಯನಿರ್ಣಯ |
| ರಾಮ. | : | ರಾಮನಾಥಾಚಾರ್ಯ |
| ವಿಜಯ. | : | ವಿಜಯಧ್ವಜೀಯ |
| ಸತ್ಯ. | : | ಸತ್ಯಧರ್ಮೀಯ |



ಉಪೋದ್ಘಾತ—

# ನಾರಾಯಣವರ್ಮದ ವಿಷಯಾದಿಗಳು ಮತ್ತು ಹತ್ತು ಕವಚಸ್ತೋತ್ರಗಳು

ಚತುರ್ಮುಖನಲ್ಲಿದ್ದುಕೊಂಡು ಸೃಷ್ಟಿಮಾಡುವ, ರುದ್ರನಲ್ಲಿದ್ದುಕೊಂಡು ಸಂಹಾರಮಾಡುವ ಭಗವಂತನೇ ತನ್ನ ವಿಷ್ಣುರೂಪದಿಂದ ಪಾಲನೆಯನ್ನೂ ನಡೆಸುವನು. ಸೃಷ್ಟಿಸಲ್ಪಟ್ಟವುಗಳನ್ನು ಸಂಹರಿಸುವವನು ಅವನೇ ಆಂದಮೇಲೆ ಸೃಷ್ಟಿಸಿದ ಬಳಿಕ ಸಂಹರಿಸುವವರೆಗೆ ಇದ್ದೇ ಇರುವವುಗಳಿಗೆ ಸಂಹರಿಸದಿರುವುದಕ್ಕಿಂತ ಬೇರೆಯಾಗಿ ಅವನ ಪಾಲಿಸುವ ಚಟುವಟಿಕೆಯ ಆವಶ್ಯಕತೆ ಇದೆಯೇ?—ಎಂಬ ಪೂರ್ವಪಕ್ಷದ ಹಿನ್ನೆಲೆಯಲ್ಲಿ ಋಗ್ವೇದದ ಆಧಾರದೊಂದಿಗೆ[1] ಭಗವಂತನು ಈ ಜಗತ್ತಿನ ಬಗ್ಗೆ ಸೃಷ್ಟಿ, ಸಂಹಾರಗಳನ್ನಷ್ಟೇ ಅಲ್ಲದೆ, ಪಾಲನೆ ಎಂಬ ಚಟುವಟಿಕೆಯನ್ನೂ ನಡೆಸುವನೆಂದು ಬ್ರಹ್ಮಸೂತ್ರವೊಂದರಲ್ಲಿ [2] ಸಿದ್ಧಾಂತಿಸಲಾಗಿದೆ.

### ಪ್ರತ್ಯೇಕವಾದ ಪಾಲನೆ:

ಆದುದರಿಂದ ಭಗವಂತನು ಸೃಷ್ಟಿಸಲ್ಪಟ್ಟವುಗಳನ್ನು ಸಂಹರಿಸದೆ ಇರುವುದಷ್ಟೇ ಅಲ್ಲದೆ, ಅವುಗಳಿಗೆ ಧಾರಣೆ ಪೋಷಣೆಗಳನ್ನು ನೀಡುವ[3] ಮೂಲಕ ಪ್ರತ್ಯೇಕವಾಗಿ ಪಾಲನೆಯನ್ನೂ ನಡೆಸುವನು ಎಂದು ಸಿದ್ಧವಾಗುವುದು. ಗಾಳಿ, ನೀರು, ಆಹಾರಾದಿಗಳನ್ನು ಒದಗಿಸಿ ನಡೆಸುವ ಪೋಷಣೆ ಒಂದು ಬಗೆಯದ್ದಾದರೆ, ಯಾವುದೇ ಆಪತ್ತಿಗೆ ಬಲಿಯಾಗಿ ಹಾನಿಗೊಳಗಾಗದಂತೆ ನೀಡುವ ಪೋಷಣೆ ಮತ್ತೊಂದು ಬಗೆಯದು.

### ಭಗವಂತನ ರಕ್ಷಣೆಯ ವೈಖರಿ:

ಉತ್ತರಾದೇವಿಯ ಗರ್ಭದಲ್ಲಿ ಬೆಳೆಯುತ್ತಿದ್ದ ಪರೀಕ್ಷಿತನನ್ನು ಘಾಸಿಗೊಳಿಸಲು

---

1 ನೈತಾವದೇನಾ ಪರೋ ಅನ್ಯದಸ್ತ್ಯುಕ್ಷಾ ಸ ದ್ಯಾವಾಭೂಮೀ ಬಿಭರ್ತಿ'
—ಋ. ವೇ. 10-31-8

2 'ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ'
—ಬ್ರ. ಸೂ. 3-2-22

3 ಧಾರಣ ಪೋಷಣಾದೇರುಕ್ತತ್ವಾತ್ —ತ. ಪ್ರ.

ಅಶ್ವತ್ಥಾಮಾಚಾರ್ಯರಿಂದ ಪ್ರಯೋಗಿಸಲ್ಪಟ್ಟ ಬ್ರಹ್ಮಶಿರೋಽಸ್ತ್ರ ಆ ಶಿಶುವಿಗೆ ಏನೂ ಹಾನಿಮಾಡದಂತೆ ಗರ್ಭದ ಸುತ್ತಲೂ ಅಡ್ಡಾಡುತ್ತ ರಕ್ಷಣೆ ನೀಡಿದ ಭಗವಂತ,[1] ಅರ್ಜುನನ ರಥದಲ್ಲಿಯೇ ಸಾರಥಿಯಾಗಿ ಕುಳಿತಿದ್ದು ಅರ್ಜುನನ ಮೇಲೆ ಪ್ರಯೋಗಿಸಲ್ಪಟ್ಟ ದೊಡ್ಡ ದೊಡ್ಡ ಅಸ್ತ್ರಗಳು ಅವನನ್ನು ಸ್ಪರ್ಶಿಸದಂತೆ ಕಾಪಾಡಿದ ಭಗವಂತ,[2] ಯಾದವಾಚಾರ್ಯರು ಯಾದವಪ್ಪನಾಯಕರಾಗಿದ್ದಾಗ ಎದುರಲ್ಲಿ ನರಸಿಂಹರೂಪದಿಂದಲೂ, ಹಿಂದೆ ಕೃಷ್ಣರೂಪದಿಂದಲೂ, ಎರಡು ಮಗ್ಗುಲುಗಳಲ್ಲಿ ಬಿಲ್ಲುಬಾಣಗಳನ್ನು ಧರಿಸಿದ್ದ ರಾಮಲಕ್ಷ್ಮಣರೂಪಗಳಿಂದಲೂ[3] ಚೋರರ ಆಕ್ರಮಣವನ್ನು ತಪ್ಪಿಸಿ ಅವರಿಗೆ ರಕ್ಷಣೆ ನೀಡಿದ ಭಗವಂತ ಪ್ರತಿಯೊಬ್ಬ ಭಕ್ತನಿಗೂ ಚೋರ, ಶಸ್ತ್ರ, ರೋಗ ಮುಂತಾದ ಪ್ರತಿಯೊಂದು ಆಪತ್ತಿನಿಂದಲೂ ರಕ್ಷಣೆಯನ್ನು ನೀಡುತ್ತಿರುವನು. ಅದೇ ರೀತಿಯಾಗಿ ಅವರವರ ಜೊತೆಗೇ ಇದ್ದು ಕೊಂಡು ಕಾಪಾಡುತ್ತಿರುತ್ತಾನೆ. ಅವರವರ ಪ್ರಾರಬ್ಧಕರ್ಮಕ್ಕನುಗುಣವಾಗಿ ರಕ್ಷಣೆ ಯನ್ನೊದಗಿಸುವ ಭಗವಂತನು ತನ್ನ ಭಕ್ತರಲ್ಲದವರಿಗೂ, ದ್ವೇಷಿಗಳಿಗೂ ಅವರವರ ಪ್ರಾರಬ್ಧಕರ್ಮಕ್ಕನುಗುಣವಾಗಿ ರಕ್ಷಣೆಯನ್ನು ನೀಡುವನು. ಆದರೆ ಭಕ್ತರು ಅವನ ರಕ್ಷಣೆಯನ್ನು ವಿವೇಚಿಸಿಕೊಳ್ಳುವರು. ಅಲ್ಲದೆ, ತನ್ನ ಭಕ್ತರಿಗೆ ಪಾಂಡವಾದಿಗಳಿಗೆ ಹೇಗೋ ಹಾಗೆ ವಿಶೇಷವಾದ ರಕ್ಷಣೆಯನ್ನೂ ಅನುಗ್ರಹಿಸುವನು. ಈ ಕಾರಣಕ್ಕಾಗಿಯಷ್ಟೇ 'ಭಕ್ತರಕ್ಷಕ'—ಎಂದು ವಿಶೇಷವಾಗಿ ಅವನನ್ನು ಗುರುತಿಸುವುದು.

**ಅನೇಕ ರೂಪಗಳ ಸ್ವೀಕಾರದ ಉದ್ದೇಶ :**

ಸೃಷ್ಟ್ಯಾದಿ ಸಕಲ ಚಟುವಟಿಕೆಗಳನ್ನೂ ತನ್ನ ಮೂಲರೂಪದಿಂದಲೇ ನಿರ್ವ ಹಿಸುವ ಸಾಮರ್ಥ್ಯವಿದ್ದರೂ ತನ್ನ ಲೀಲೆಗಳ, ಮಹಿಮೆಗಳ ಸ್ಮರಣಾದಿಗಳನ್ನು ನಡೆಸಿ ಸಿದ್ಧಿ ಪಡೆಯುವಂತಾಗಲೆಂಬ ಉದ್ದೇಶದಿಂದ[4] ಬೇರೆ ಬೇರೆ ಚಟುವಟಿಕೆಯು

1 ಯದ್ಯಪ್ಯಸ್ತ್ರಂ ಬ್ರಹ್ಮಶಿರಸ್ತ್ವಮೋಘಂ ಚಾಪ್ರತಿಕ್ರಿಯಮ್ । ವೈಷ್ಣವಂ ತೇಜ ಆಸಾದ್ಯ ಸಮಶಾಮ್ಯದ್ ಭೃಗೂದ್ವಹ । —ಭಾಗ. 1-8-15

2 ಯದ್ದೋಃಷ್ಟು ಮಾ ಪ್ರಣಿಹಿತಂ....ಅಸ್ತ್ರಾಣ್ಯಮೋಘಮಹಿತಾನಿ ನಿರೂಪಿತಾನಿ ನೋಃ ಪಸ್ಪೃಶುರ್ನೃಹರಿದಾಸಮಿವಾಸುರಾಣಿ —ಭಾಗ. 1-15-16

3 ಅಗ್ರತೋ ನಾರಸಿಂಹಶ್ಚ ಪೃಷ್ಠತೋ ಗೋಪಿನಂದನಃ । ಉಭಯೋಃ ಪಾರ್ಶ್ವಯೋರಾಸ್ತಾಂ ಸಶರೌ ರಾಮಲಕ್ಷ್ಮಣೌ ।

4 '....ಸ್ವವಶಾಖಿಲೋಽಪ್ಯನುಪಚಾರತಃ ಸ್ವಯಮ್ ! ಸ್ಮೃತಿಕೀರ್ತನ–ಪ್ರಣತಿಭಿರ್ವಿಮುಕ್ತಯೇ ಸ್ವಜನಸ್ಯ ಯಾತ್ಯಯಮನೇಕರೂಪತಾಮ್ ।
ಮ. ವಿ. 8-13

ನಿರ್ವಹಣೆಗಾಗಿ ಬೇರೆ ಬೇರೆ ರೂಪ ತಾಳಿ, ಆಯಾ ರೂಪದ ಮೂಲಕ ಸೃಷ್ಟ್ಯಾದಿ ಗಳಿಗೆ ಸಂಬಂಧಿಸುವ ತನ್ನ ಮಹಿಮೆಗಳನ್ನು, ಲೀಲೆಗಳನ್ನು ಅಭಿವ್ಯಕ್ತಗೊಳಿಸುವ ಭಗವಂತನು ರಕ್ಷಣೆಗೆ ಸಂಬಂಧಿಸುವ ಎಲ್ಲ ಚಟುವಟಿಕೆಗಳನ್ನೂ ಒಂದೇ ರೂಪದಿಂದ ನಿರ್ವಹಿಸಲು ಸಮರ್ಥನಾದರೂ ಸಾಧಕರ ಮನನಾದಿಗಳಿಗೆ ವಸ್ತುವನ್ನೊದಗಿಸುವುದ ಕ್ಕಾಗಿ ಅನೇಕಾನೇಕ ರೂಪಗಳನ್ನು ತಾಳಿ ಬೇರೆ ಬೇರೆ ಚಟುವಟಿಕೆಯನ್ನು ಬೇರೆ ರೂಪದ ಮೂಲಕ ನಡೆಸುವನು.

'ದೇವತೆಗಳು ಬುದ್ಧಿಪ್ರೇರಿಸುವ ಮೂಲಕವೇ ರಕ್ಷಿಸುವುದು ಹೊರತು ಪಶು ಪಾಲಕ ದಂಡವನ್ನು ಹಿಡಿದುಕೊಂಡು ಕುರಿ ಮುಂತಾದ ಪಶುಗಳನ್ನು ರಕ್ಷಿಸುವಂತೆ ಪ್ರಜೆಗಳನ್ನು ರಕ್ಷಿಸುವುದಿಲ್ಲ—ಎಂಬ ಮಹಾಭಾರತದ ಮಾತು[1] ಆಹಾರಾದಿಗಳನ್ನು ನೀಡಿ ಒದಗಿಸುವ ರಕ್ಷಣೆ ಬುದ್ಧಿ ಪ್ರೇರಣೆಯ ಮೂಲಕವೇ ಹೊರತು ನೇರವಾಗಿ ಅಲ್ಲ—ಎಂದು ತಿಳಿಸುತ್ತಿದೆಯೇ ಹೊರತು ಬೇರೆ ಬಗೆಯ ರಕ್ಷಣೆಯನ್ನು ನಿಷೇಧಿಸು ವುದಿಲ್ಲ.

### ಭದ್ರತೆಯ ಕವಚವನ್ನು ತೊಡಿಸುವ ನಾರಾಯಣ ಕವಚ :

ಹೀಗೆ ತನ್ನ ಬೇರೆ ಬೇರೆ ರೂಪಗಳಿಂದ ಬೇರೆ ಬೇರೆ ಬಗೆಯ ರಕ್ಷಣೆಯನ್ನೊ ದಗಿಸುತ್ತಿರುವ ಭಗವಂತನ ಬೇರೆ ಬೇರೆ ರೂಪಗಳನ್ನು ಉಲ್ಲೇಖಿಸಿ, ಅವುಗಳಲ್ಲಿ ಬೇರೆ ಬೇರೆ ಬಗೆಯ ರಕ್ಷಣೆಗಾಗಿ ಪ್ರಾರ್ಥನೆಗಳನ್ನು ಸಲ್ಲಿಸಿ, ಅವುಗಳ ಮೂಲಕ ಸರ್ವತೋಮುಖವಾದ ಭದ್ರತೆಯ ಕವಚವನ್ನು ತೊಡಿಸಲು ಹೊರಟಿರುವಂತ ಹದ್ದು—'ನಾರಾಯಣಕವಚ' ಅಥವಾ 'ನಾರಾಯಣವರ್ಮ'. ಪ್ರಾರ್ಥನೆಯನ್ನು ಸಲ್ಲಿಸದಿದ್ದರೂ ಭಗವಂತನೇನೋ ತನ್ನ ರಕ್ಷಣೆಯನ್ನು ಉಪಸಂಹಾರಗೊಳಿಸುವುದಿಲ್ಲ ಆದರೂ ಕ್ಷಣ ಕ್ಷಣಕ್ಕೆ ರಕ್ಷಣೆಯನ್ನು ನೀಡುತ್ತಿರುವ ಅವನ ಉಪಕಾರವನ್ನು ಸ್ಮರಿಸಿ ಕೊಳ್ಳುವುದು ಅವಶ್ಯ ಕರ್ತವ್ಯ. ಹೀಗೆ ಕರ್ತವ್ಯವನ್ನು ಪಾಲಿಸಿದವರಿಗೆ ಪುಣ್ಯ ದೊರಕುವುದಲ್ಲದೆ. ಇದರಿಂದ ಪ್ರಸನ್ನನಾಗುವ ಭಗವಂತನು ಅವರಿಗೆ ವಿಶೇಷವಾ ದ ರಕ್ಷಣೆಯನ್ನೂ ನೀಡುವನು.

### ರಕ್ಷಣೆಯ ಪ್ರಭೇದಗಳು :

ಭಗವಂತನು ನೀಡುವ ರಕ್ಷಣೆಯಲ್ಲಿ ಮುಖ್ಯವಾಗಿ ಎರಡು ಪ್ರಭೇದಗಳು. ಗಾಳಿ, ನೀರು, ಅನ್ನ. ಭೂಮಿಯನ್ನೊದಗಿಸುವುದರ ಮೂಲಕ ನೀಡುವ ರಕ್ಷಣೆ

---

1 ನ ದೇವಾ ದಂಡಮಾದಾಯ ರಕ್ಷಂತಿ ಪಶುಪಾಲವತ್ । ಯಂ ರಕ್ಷಿತುಮಿಚ್ಛಂತಿ ಬುದ್ಧ್ಯಾ ಸಂಯೋಜಯಂತಿ ತಮ್ —ಮ. ಭಾರ.

ಒಂದು ಬಗೆಯದ್ದಾದರೆ, ಯಾವುದೇ ಆಪತ್ತಿಗೊಳಗಾಗದೆ ಇರುವಂತೆ ನೀಡುವ ರಕ್ಷಣೆ ಮತ್ತೊಂದು ಬಗೆಯದು. ಈ ಎರಡನೇ ಬಗೆಯ ರಕ್ಷಣೆಯನ್ನೇ ವಿಶೇಷ ವಾಗಿ ನಾರಾಯಣವರ್ಮದಲ್ಲಿ ಪ್ರಾರ್ಥಿಸಲಾಗಿದೆ. ಈ ಬಗೆಯ ರಕ್ಷಣೆಯೂ ಬಾಹ್ಯ ಹಾಗೂ ಆಂತರಿಕವಾದ ಎರಡು ಪ್ರಭೇದಗಳನ್ನೊಳಗೊಂಡಿದೆ. ದೇಹಕ್ಕೆ ಆಸುರೀಶಕ್ತಿಗಳಿಂದ, ಕ್ರೂರಮೃಗಗಳಿಂದ, ಅಸ್ತ್ರಶಸ್ತ್ರಾದಿಗಳಿಂದ ಆಪತ್ತು ಸಂಭವಿಸ ದಂತೆ ನೀಡಲಾಗುವ ರಕ್ಷಣೆ ಬಾಹ್ಯ ರಕ್ಷಣೆ ಎನಿಸಿದರೆ, ಅಂತಃಕರಣಕ್ಕೆ ದುಶ್ಶಾಸ್ತ್ರಾ ಧ್ಯಯನ, ಶಾಸ್ತ್ರನಿಷಿದ್ಧಾಹಾರದ ಸೇವನೆ, ಅನ್ಯಥಾಜ್ಞಾನ ಮುಂತಾದವುಗಳಿಂದ ದುಷ್ಪ್ರಭಾವ ತಗಲದಂತೆ ನೀಡಲಾಗುವ ರಕ್ಷಣೆ ಆಂತರಿಕ ರಕ್ಷಣೆ ಎನಿಸುವುದು. ಈ ಎರಡು ಪ್ರಭೇದದ ರಕ್ಷಣೆಯನ್ನೂ ನಾರಾಯಣವರ್ಮದಲ್ಲಿ ಕೇಳಿಕೊಳ್ಳಲಾಗಿದೆ.

**ಬಾಹ್ಯಾಪತ್ತುಗಳಿಂದ ರಕ್ಷಣೆ :**

ಮತ್ಸ್ಯ, ವಾಮನ, ತ್ರಿವಿಕ್ರಮ, ನರಸಿಂಹ, ವರಾಹ, ಪರಶುರಾಮ ಹಾಗೂ ರಾಮಚಂದ್ರ—ಈ ಏಳು ಭಗವದ್ರೂಪಗಳನ್ನು ಉಲ್ಲೇಖಿಸಿ ನೀರಲ್ಲಿ, ಸ್ಥಳದಲ್ಲಿ, ಆಕಾಶದಲ್ಲಿ, ಅರಣ್ಯಾದಿಗಳಲ್ಲಿ, ದಾರಿಯಲ್ಲಿ, ಬೆಟ್ಟಗಳಲ್ಲಿ, ದೇಶಾಂತರ ದಲ್ಲಿ ಸಂಭವಿಸಬಹುದಾದ ಕ್ರೂರಮೃಗ ಮುಂತಾದವುಗಳ ಬಾಹ್ಯ ಆಪತ್ತುಗಳಿಂದ ರಕ್ಷಣೆಯನ್ನು ಪ್ರಾರ್ಥಿಸಲಾಗಿದೆ. ಧನ್ವಂತರಿ ಮತ್ತು ಬಲರೂಪಗಳಲ್ಲಿ ರೋಗ ರುಜಿನಗಳ, ಸರ್ಪಾದಿಗಳ ಬಾಹ್ಯಾಪತ್ತುಗಳಿಂದ ರಕ್ಷಣೆಯನ್ನು ಪ್ರಾರ್ಥಿಸಲಾಗಿದೆ. ಸುದರ್ಶನಚಕ್ರ, ಗದಾ, ಶಂಖ, ಕತ್ತಿ ಹಾಗೂ ಗುರಾಣಿ ಈ ಐದು ಆಯುಧ ಗಳನ್ನು ಉಲ್ಲೇಖಿಸಿ, ಅವುಗಳಲ್ಲಿ ಶತ್ರು ಸೈನ್ಯಾದಿ ಬಾಹ್ಯಾಪತ್ತುಗಳಿಂದ ರಕ್ಷಣೆ ಯನ್ನು ಕೇಳಿಕೊಳ್ಳಲಾಗಿದೆ. ಭಗವನ್ನಾಮ, ರೂಪ, ಅಸ್ತ್ರಗಳ ಸಂಕೀರ್ತನೆ ಯಿಂದ ಶ್ರೇಯೋವಿರೋಧಿಗಳಾದ ಗ್ರಹಗಳು, ಉಲ್ಕಾಪಾತಗಳು ದುಷ್ಟಜನರು, ಹರಿದಾಡುವ ಪಶುಗಳು, ದಾಡೆವುಳ್ಳ ಪಶುಗಳು—ಇವೆಲ್ಲವುಗಳ ಮೂಲಕ ಸಂಭವಿಸ ಬಹುದಾದ ಬಾಹ್ಯಾಪತ್ತುಗಳು ಪರಿಹಾರವಾಗಲಿ—ಎಂದು ಆಶಿಸಲಾಗಿದೆ.

**ಅಂತರಾಪತ್ತುಗಳಿಂದ ರಕ್ಷಣೆ :**

ನಾರಾಯಣ, ನರ, ದತ್ತ, ಕಪಿಲ, ಸನತ್ಕುಮಾರ, ಹಯಗ್ರೀವ, ಐತರೇಯ, ಋಷಭ, ಯಜ್ಞ, ದ್ವೈಪಾಯನ, ಬುದ್ಧ, ಕಲ್ಕಿ—ಈ ಹನ್ನೆರಡು ರೂಪಗಳನ್ನು ಉಲ್ಲೇಖಿಸಿ, ಇವುಗಳಲ್ಲಿ ಪ್ರಮಾದ, ಅಹಂಕಾರ ಯೋಗಗಳನ್ನು ಪಾಲಿಸದಿರುವುದು, ಕರ್ಮಬಂಧನ, ನಿಷಿದ್ಧಕಾಮನಾಸಕ್ತಿ, ದಾರಿಯಲ್ಲಿ ದೇವಾವ- ಮಾನ, ಪ್ರಾಧಾನ್ಯದೃಷ್ಟಿಯಿಂದ ಇತರ ದೇವತೆಗಳನ್ನು ಆರಾಧಿಸುವುದು, ಮಾನಾಪ ಮಾನಾದಿ ದ್ವಂದ್ವಗಳಿಗೆ ಸ್ಪಂದಿಸುವುದು, ಸ್ವರ್ಗಾದಿ ಲೋಕಗಳನ್ನು ಬಯಸುವುದು, ಅನ್ಯಥಾಜ್ಞಾನ, ಪಾಷಂಡಶಾಸ್ತ್ರಗಳ ಶ್ರವಣಾದಿ, ಕಲಿಕಾಲದ ಪ್ರಭಾವಕ್ಕೊಳ

ಗಾಗುವುದು—ಮುಂತಾದ ಅಂತಃಕರಣದ ಕಾಲುಷ್ಯಕ್ಕೆ ನಿಮಿತ್ತಗಳಾಗಿದ್ದು ಆಂತರಿಕ ಆಪತ್ತುಗಳೆನಿಸುವವುಗಳಿಂದ ಪಾರು ಮಾಡಲು ಪ್ರಾರ್ಥಿಸಲಾಗಿದೆ.

**ಸಾಮಾನ್ಯ ರಕ್ಷಣೆಗೆ ಪ್ರಾರ್ಥನೆ :**

ಬಾಹ್ಯ ಅಥವಾ ಆಂತರ ಆಪತ್ತುಗಳೆಂದು ಪ್ರತ್ಯೇಕವಾಗಿ ಉಲ್ಲೇಖಿಸದೆ, ಎರಡು ಬಗೆಯ ಆಪತ್ತುಗಳಿಂದಲೂ ರಕ್ಷಣೆ ನೀಡಬೇಕೆಂದು ಕೆಲವು ರೂಪಗಳಲ್ಲಿ ಸಾಮಾನ್ಯವಾಗಿ ರಕ್ಷಣೆಯನ್ನು ಪ್ರಾರ್ಥಿಸಿಕೊಂಡಿರುವುದೂ ಇದೆ. ಹರಿ, ಕೂರ್ಮ ಕೇಶವಾದಿ ದ್ವಾದಶರೂಪಗಳು, ಗರುಡ, ಭೂಷಣ. ಆಯುಧಾದಿಗಳಲ್ಲಿರುವ ರೂಪಗಳು—ಇವುಗಳನ್ನೆಲ್ಲ ಉಲ್ಲೇಖಿಸಿ, ಇವುಗಳಲ್ಲಿ ಸಕಲ ವಿಧದ ರಕ್ಷಣೆಯನ್ನು ಪ್ರಾರ್ಥಿಸಿಕೊಳ್ಳಲಾಗಿದೆ.

**ಮೂವತ್ತಆರು ರೂಪಗಳಲ್ಲಿ ನಾಲ್ಕು ಮಜಲಿನ ರಕ್ಷಣೆಗಾಗಿ ಪ್ರಾರ್ಥನೆ :**

ಹೀಗೆ, ನಾರಾಯಣಕವಚದಲ್ಲಿ ಹರಿ, ಮತ್ಸ್ಯ, ವಾಮನ, ತ್ರಿವಿಕ್ರಮ, ನರಸಿಂಹ, ವರಾಹ, ಪರಶುರಾಮ, ರಾಮಚಂದ್ರ, ನಾರಾಯಣ, ನರ, ದತ್ತ, ಕಪಿಲ, ಸನತ್ಕುಮಾರ, ಐತರೇಯ, ಕೂರ್ಮ, ಧನ್ವಂತರಿ, ಋಷಭ, ಯಜ್ಞ, ಬಲ, ದ್ವೈಪಾಯನ, ಬುದ್ಧ, ಕಲ್ಕಿ, ಕೇಶವ, ಗೋವಿಂದ, ನಾರಾಯಣ, ವಿಷ್ಣು, ಮಧುಸೂದನ, ಮಾಧವ, ಹೃಷೀಕೇಶ, ಪದ್ಮನಾಭ, ಶ್ರೀಧರ, ಜನಾರ್ದನ, ತ್ರಿವಿಕ್ರಮ, ದಾಮೋದರ, ವಿಷ್ಣು, ವಾಮನ – ಹೀಗೆ ಮೂವತ್ತಆರು ಭಗವದ್ರೂಪಗಳನ್ನೂ, ಶಂಖ, ಚಕ್ರ, ಗುರಾಣಿ, ಕತ್ತಿ, ಗದೆ, ಬಾಣ, ಬಿಲ್ಲು, ಹಗ್ಗ, ಶಕ್ತ್ಯಾಯುಧ (?) ಮುಂತಾದ ಆಯುಧಗಳನ್ನೂ, ಸ್ಪಷ್ಟವಾಗಿ ಉಲ್ಲೇಖಿಸಿ, – ಇವುಗಳಿಂದ ಸ್ಥಲ, ಜಲ, ಅರಣ್ಯ — ಮುಂತಾದ ಪ್ರದೇಶಗಳಿಗೆ ಸಂಬಂಧಪಟ್ಟಂತೆ, ಹಾಸ್ಯ, ಪ್ರಮಾದ, ಪಾಷಂಡಶಾಸ್ತ್ರಶ್ರವಣ — ಮುಂತಾದ ಸಂದರ್ಭಗಳಿಗೆ, ಘಟನೆಗಳಿಗೆ ಸಂಬಂಧಪಟ್ಟಂತೆ, ಪ್ರಾತಃ, ಸಂಗವ, ಪ್ರಾಹ್ಣ– ಮುಂತಾದ ಕಾಲವಿಶೇಷಗಳಿಗೆ ಸಂಬಂಧಪಟ್ಟಂತೆ, ಗ್ರಹ, ದುರ್ಜನರು, ದಂಷ್ಟ್ರ ಪಶುಗಳು–ಮುಂತಾದ ವ್ಯಕ್ತಿಗಳಿಗೆ ಸಂಬಂಧಪಟ್ಟಂತೆ – ಹೀಗೆ ನಾಲ್ಕು ಮಜಲು ಗಳಲ್ಲಿ ರಕ್ಷಣೆಯನ್ನು ಕೇಳಿಕೊಳ್ಳಲಾಗಿದೆ. ಒಬ್ಬ ವ್ಯಕ್ತಿ ಒಂದು ಮಜಲಿನಲ್ಲಿ ಒಂದು ಬಗೆಯ ರಕ್ಷಣೆಯನ್ನು ಒಂದು ರೂಪದಿಂದ ಪಡೆಯುತ್ತಿರುವಾಗ, ಆ ವ್ಯಕ್ತಿಗೆ ಮತ್ತೊಂದು ಮಜಲಲ್ಲಿ ಮತ್ತೊಂದು ರೂಪದಿಂದ ಇನ್ನೊಂದು ಬಗೆಯ ರಕ್ಷಣೆಯ ಆವಶ್ಯಕತೆಯೂ ಇದ್ದೇ ಇರುವುದು. ಉದಾಹರಣೆಗೆ–ಜಲದಲ್ಲಿ ಮತ್ಸ್ಯಮೂರ್ತಿ ಯಿಂದ ರಕ್ಷಣೆ ಪಡೆಯುತ್ತಿರುವಾಗಲೇ, ಪ್ರಾತಃಕಾಲದಲ್ಲಿ ರಕ್ಷಿಸುವ ಕೇಶವನ ರಕ್ಷಣೆ ಆ ಕಾಲಕ್ಕೆ ಸಂಬಂಧಿಸಿದಂತೆ ಬೇಕೇ ಬೇಕು. ನಾರಾಯಣನಿಂದ ಪ್ರಮಾದದ ವಿಷಯದಲ್ಲಿ ರಕ್ಷಿತನಾಗುತ್ತಿರುವವನು, ಅದೇ ಅವಧಿಯಲ್ಲಿ ದ್ವೈಪಾಯನರಿಂದ

ಅನ್ಯಥಾ ಜ್ಞಾನದ ವಿಷಯದಲ್ಲೂ, ಬುದ್ಧನಿಂದ ಪಾಷಂಡಶಾಸ್ತ್ರಶ್ರವಣದ ವಿಷಯ ದಲ್ಲೂ ಪ್ರತ್ಯೇಕವಾಗಿ ರಕ್ಷಿತನಾಗುತ್ತಿರಬೇಕು. ಕಲಿಕಾಲ ಪ್ರಯುಕ್ತ ಕಾಲುಷ್ಯದ ವಿಷಯದಲ್ಲಿ ಕಲ್ಕಿಯಿಂದ ರಕ್ಷಿತನಾಗುತ್ತಿರುವವನು ಕೇಶವಾದಿರೂಪಗಳಿಂದ ಆಯಾ ಕಾಲವಿಶೇಷದಲ್ಲಿ ರಕ್ಷಣೆಯನ್ನು ಪ್ರತ್ಯೇಕವಾಗಿ ಪಡೆಯುತ್ತಿರಲೇಬೇಕು.

**ರಕ್ಷಣೆಯಲ್ಲಿ ಬೇರೆ ರೀತಿಯ ಪ್ರಭೇದಗಳು :**

'ನಾರಾಯಣವರ್ಮ'ದಲ್ಲಿ ಪ್ರಾರ್ಥಿಸಿಕೊಳ್ಳಲಾಗುವ ರಕ್ಷಣೆಯನ್ನು ಬೇರೆ ರೀತಿಯಲ್ಲೂ ವಿಂಗಡಿಸಬಹುದು.

ಜಲಚರ ಪಶುಗಳು, ಹಾವುಗಳು, ಭೂತಗಳು, ಗ್ರಹಗಳು — ಮುಂತಾದ ದುಷ್ಟ ವ್ಯಕ್ತಿಗಳ ದೆಸೆಯಿಂದ ಕೇಳಲಾದ ರಕ್ಷಣೆ ಎಂದರೆ ಅವುಗಳ ಆಕ್ರಮಣಕ್ಕೆ ಒಳಗಾಗದಂತೆ ನೋಡಿಕೊಳ್ಳುವುದು.

ಕರ್ಮ ಬಂಧನ, ದೇವಾಪಮಾನ, ಪ್ರಾಧಾನ್ಯದೃಷ್ಟಿಯಿಂದ ಇತರ ದೇವತೆಗಳನ್ನು ಆರಾಧಿಸುವುದು, ಅಪಥ್ಯಾಹಾರದ ಸೇವನೆ, ಕಲಿಕಾಲದ ಕಾಲುಷ್ಯ, ಪಾಷಂಡ ಶಾಸ್ತ್ರಾಧ್ಯಯನ–ಮುಂತಾದ ಪ್ರಸಂಗ, ಘಟನೆಗಳ ದೆಸೆಯಿಂದ ಕೇಳಲಾಗುವ ರಕ್ಷಣೆ ಎಂದರೆ ಇವುಗಳನ್ನು ಆದಷ್ಟು ದೂರದಲ್ಲಿರಿಸುವಂತೆ ನೋಡಿಕೊಳ್ಳುವುದು. ಹಾಗೆಯೇ ಪ್ರಾರಬ್ಧಕರ್ಮಕ್ಕೊಳಗಾಗಿ ಇವುಗಳನ್ನು ಜೀವನದಲ್ಲಿ ಸೇರಿಸಿಕೊಳ್ಳುವಂತಾದರೂ, ಇವುಗಳಿಂದಾಗಿ ಜೀವನದ ಮೇಲೆ ಹೆಚ್ಚು ದುಷ್ಟ ಪ್ರಭಾವ ಬೀರಲ್ಪಡದಂತೆ ನೋಡಿಕೊಳ್ಳುವುದು.

ಕಾಲವಿಶೇಷಗಳಲ್ಲಿ ಭಗವದ್ರೂಪಗಳಿಂದ ಪ್ರಾರ್ಥಿಸಿಕೊಳ್ಳಲಾಗುವ ರಕ್ಷಣೆಯಲ್ಲಿ ಮೇಲೆ ಉಲ್ಲೇಖಿಸಲಾದ ಪ್ರಭೇದಗಳು ಸೇರಿಕೊಳ್ಳುವವಲ್ಲದೆ, ಗಾಳಿ, ನೀರು, ಅನ್ನಾದಿಗಳನ್ನು ಒದಗಿಸುವುದರ ಮೂಲಕ ನಡೆಸಲಾಗುವ ರಕ್ಷಣೆ, ಅತಿವೃಷ್ಟಿ, ಅನಾವೃಷ್ಟಿ ಮುಂತಾದ ಪ್ರಾಕೃತಿಕ ಘಟನೆಗಳಿಗೆ ಬಲಿಯಾಗದಂತೆ ಅನುಗ್ರಹಿಸುವ ರಕ್ಷಣೆ, ದೇವತೆಗಳ ವಿಕೋಪಕ್ಕೆ ತುತ್ತಾಗದಂತೆ ನೀಡುವ ರಕ್ಷಣೆ— ಇವೆಲ್ಲವೂ ಸೇರಿಕೊಳ್ಳುವವು.

**ನಾರಾಯಣ ಕವಚದ ಪ್ರಭಾವ :**

ಈ ರೀತಿಯಾಗಿ ಪ್ರತಿಯೊಂದು ರೀತಿಯ ಆಕ್ರಮಣದಿಂದ, ಆಪತ್ತಿನಿಂದ, ಹಾನಿಯಿಂದ ರಕ್ಷಣೆಯನ್ನು ಅನುಗ್ರಹಿಸುತ್ತಿರುವ ಭಗವದ್ರೂಪಗಳ ಅನುಸಂಧಾನಕ್ಕೆ ಪುಷ್ಟಿ ನೀಡುವ ಮೂಲಕ ರಕ್ಷಣೆಯ 'ವಜ್ರಕವಚ'ವನ್ನು ತೊಡಿಸುವ 'ನಾರಾಯಣಕವಚ'ದ ಪ್ರಭಾವಕ್ಕೆ ಇಂದ್ರ ಉತ್ತಮ ನಿದರ್ಶನ. ವಿಶ್ವರೂಪಾಚಾರ್ಯರಿಂದ ಅದರ ಉಪದೇಶವನ್ನು ಪಡೆದುಕೊಂಡ ಅವನು ಅದರ ಧಾರಣೆಯ

ಪ್ರಭಾವದಿಂದಾಗಿಯೇ ಆ ಕೂಡಲೇ ಅಸುರರನ್ನೆಲ್ಲ ಸೋಲಿಸಲು ಸಮರ್ಥನಾದ. ವಾಸ್ತವವಾಗಿ ದೇವೇಂದ್ರ ಮೊದಲೇ ನಾರಾಯಣವರ್ಮವನ್ನು ತಿಳಿದಿದ್ದ. ಆದರೆ ವಿಶ್ವರೂಪಾಚಾರ್ಯರಿಂದ ಮತ್ತೊಮ್ಮೆ ಉಪದೇಶ ಪಡೆದಾಗ ಆ ನಾರಾಯಣ ವರ್ಮ ಇನ್ನಷ್ಟು ಫಲಕಾರಿಯಾಗುವುದೆಂಬ ಉದ್ದೇಶದಿಂದಷ್ಟೇ ವಿಶ್ವರೂಪಾ ಚಾರ್ಯರಿಂದ ಮತ್ತೊಮ್ಮೆ ಅದರ ಉಪದೇಶ ಪಡೆದ.[1] ವಿಶ್ವರೂಪಾಚಾರ್ಯರ ಉಪದೇಶದಿಂದಾಗಿ ಅವನಲ್ಲಿದ್ದ ನಾರಾಯಣವರ್ಮ ವಿದ್ಯೆಗೆ ಇನ್ನಷ್ಟು ಮೆರುಗು ಬಂತು. ಆದ್ದರಿಂದಲೇ ಮೂರು ಲೋಕದ ಐಶ್ವರ್ಯವನ್ನೂ ದೇವೇಂದ್ರನಿಗೆ ತಲಂಪಿಸಿಕೊಡಲು ಅದು ಸಮರ್ಥವೆನಿಸಿತು.

ನಾರಾಯಣವರ್ಮದ ಫಲಶ್ರುತಿಯಲ್ಲಿ ಉಲ್ಲೇಖಿಸಲ್ಪಡುವ ಕೌಶಿಕ ಬ್ರಾಹ್ಮಣ ನಾರಾಯಣವರ್ಮದ ಪ್ರಭಾವಕ್ಕೆ ಮತ್ತೊಂದು ಉತ್ತಮ ನಿದರ್ಶನ. ಪ್ರತಿನಿತ್ಯ ನಾರಾಯಣವರ್ಮ ಅನುಸಂಧಾನದ ಫಲವಾಗಿ ಅವನು ತನ್ನ ಮೃತ ಶರೀರದ ಎಲುಬು ಗಳಿಂದ ಚಿತ್ರರಥ ಗಂಧರ್ವನ ವಿಮಾನವನ್ನು ಆಕರ್ಷಿಸುವಷ್ಟು ಸಮರ್ಥನಾಗಿದ್ದ.

## ಉಪನಿಷತ್ತಿನಲ್ಲಿ ಉಲ್ಲೇಖ :

ಬೃಹದಾರಣ್ಯಕೋಪನಿಷತ್ತಿನ ಮಧುವಿದ್ಯೆಯ ಪ್ರಸ್ತಾವದಲ್ಲಿ ನಾರಾಯಣ ವರ್ಮದ ಉಲ್ಲೇಖ ಬಂದಿರುವುದು[2] —ಅದರ ಹಿರಿಮೆಗೆ ಮತ್ತೊಂದು ಜ್ಞಾಪಕ.

ನಾರಾಯಣವರ್ಮ ವಿದ್ಯೆ ದಧೀಚಿ ಋಷಿಯಲ್ಲಿ ಇತ್ತು. ಅದನ್ನು ಇತರ ಯಾರಿಗೂ ಉಪದೇಶಿಸಬಾರದು; ಒಂದೊಮ್ಮೆ ಉಪದೇಶಿಸಿದಲ್ಲಿ ತಲೆಯನ್ನೇ

---

1 ಪೂರ್ವಂ ಜಾನನ್ನಪೀಂದ್ರಃ ಪಶ್ಚಾದ್ ವಿಶ್ವರೂಪಾಚ್ಛ್ರುತ್ವೇತಿ ಪುನರ್ನವತ್ವಾಯ....
—ಬೃ. ಉ. ಭಾ. 4-5-17

2 ಇದಂ ವೈ ತನ್ಮಧು ದಧ್ಯಙ್–ಆಥರ್ವಣೋಽಶ್ವಿಭ್ಯಾಮುವಾಚ ತದೇತದೃಷಿಃ ಪಶ್ಯನ್ನವೋಚದಾಥರ್ವಣಾಯಾಶ್ವಿನಾ ದಧೀಚೇಽಶ್ವ್ಯಂ ಶಿರಃ ಪ್ರತ್ಯೈರಯತಂ ಸ ವಾಂ ಮಧು ಪ್ರಾವೋಚದೃತಾಯಂಸ್ತ್ವಾಷ್ಟ್ರಂ ಯದ್ ದಸ್ರಾವಪಿ ಕಕ್ಷ್ಯಂ ವಾಮಿತಿ
—ಬೃ. ಉ. 4-5-17

* ಪ್ರತ್ಯೈರಯತಂ ಪ್ರತಿಸಮಧತ್ತಮ್ । ಋತಾಯನ್ ಸತ್ಯಂ ಕುರ್ವನ್ । ಕಕ್ಷ್ಯಂ ನಾರಾಯಣಕವಚಮ್ । ತ್ವಾಷ್ಟ್ರಂ ತ್ವಷ್ಟುಃ ಪುತ್ರೇಣ ವಿಶ್ವರೂಪೇಣೇಂದ್ರಾಯೋಕ್ತಮ್
—ಬೃ. ಉ. ಭಾ.

* ತಸ್ಯಾಂ ವಿದ್ಯಾಯಾಂ ಪರಸ್ಯೋಕ್ತಾಯಾಂ ತವ ಶಿರಶ್ಛೇತ್ಸ್ಯಾಮೀತೀಂದ್ರೇಣ ದಧೀಚಂ ಪ್ರತ್ಯುಕ್ತೇ ಸೋಽಶ್ವಿಭ್ಯಾಮಾವಾಂ ಬ್ರೂಹೀತ್ಯುಕ್ತ ಇಂದ್ರೇಣೋಕ್ತಮಾಹ । ತದಾಽಶ್ವಿಭ್ಯಾಂ ಪಾವ ಇತ್ಯುಕ್ತ್ವಾ ತಚ್ಛಿರಶ್ಛಿತ್ವಾಽನ್ಯತ್ರ ನಿಧಾಯಾಶ್ವಶಿರಃ ಸಂಧಿತಮ್ । ತೇನ ವಿದ್ಯಾಯಾಮುಕ್ತಾಯಾಂ ತಸ್ಮಿನ್ನಿಂದ್ರೇಣ ಛಿನ್ನೇ ಪೂರ್ವಶಿರಃ ಸಂಧಿತಮ್ ।
—ಬೃ. ಉ. ಭಾ.

ಕತ್ತರಿಸುವೆನೆಂದು ದೇವೇಂದ್ರ ದಧೀಚಿಗೆ ಎಚ್ಚರಿಸಿದ್ದ. ಅಶ್ವಿನೀ ದೇವತೆಗಳು ಬಂದು ದಧೀಚಿಯಲ್ಲಿ ಆ ವಿದ್ಯೆಯನ್ನು ಉಪದೇಶಿಸಲು ಒತ್ತಾಯಿಸಿದರು. ದಧೀಚಿ ಅವರಲ್ಲಿ ದೇವೇಂದ್ರ ತನಗೆ ನೀಡಿದ ಎಚ್ಚರಿಕೆಯನ್ನು ತಿಳಿಸಲು ಅವರು ದಧೀಚಿಯ ತಲೆಯನ್ನು ಕತ್ತರಿಸಿ, ಬೇರೆ ಕಡೆ ಅದನ್ನು ಜೋಪಾನವಾಗಿಟ್ಟು ಅವನ ತಲೆಯ ಸ್ಥಾನದಲ್ಲಿ ಕುದುರೆಯ ತಲೆಯನ್ನು ಜೋಡಿಸಿದರು. ದಧೀಚಿ ಅಶ್ವಿನೀದೇವತೆಗಳಿಗೆ ನಾರಾಯಣವರ್ಮವನ್ನು ಉಪದೇಶಿಸುವನು. ಈ ಸಂಗತಿ ತಿಳಿದಾಕ್ಷಣ ದೇವೇಂದ್ರ ದಧೀಚಿಯ ತಲೆಯನ್ನು ಕತ್ತರಿಸುವನು. ಆಗ ಅಶ್ವಿನೀ ದೇವತೆಗಳು ದಧೀಚಿಯ ನಿಜವಾದ ತಲೆಯನ್ನು ತಂದು ಜೋಡಿಸುವರು.

ಹೀಗೆ ನಾರಾಯಣವರ್ಮದ ಉಪದೇಶಕ್ಕೆ ಸಂಬಂಧಿಸಿದ ಘಟನೆಗಳ ಉಲ್ಲೇಖ ಅಪೌರುಷೇಯವಾದ ಉಪನಿಷತ್ತಿನಲ್ಲಿ ಬಂದಿರುವ ಪ್ರಯುಕ್ತ ನಾರಾಯಣ ವರ್ಮಕ್ಕೆ ಒಂದು ಬಗೆಯ ಮಹತ್ತ್ವವಾದರೆ, ನಾರಾಯಣವರ್ಮವನ್ನು ಬೇರೆ ಯಾರಿಗೂ ಉಪದೇಶಿಸಬಾರದೆಂದು ಎಚ್ಚರಿಸುವ ಮೂಲಕ ಇಂದ್ರನಿಂದ ಸೂಚಿಸ ಲ್ಪಟ್ಟ ಅದರ ರಹಸ್ಯತ್ವ ಪ್ರಯುಕ್ತ ಅದಕ್ಕೆ ಮತ್ತೊಂದು ಬಗೆಯ ಮಹತ್ತ್ವ; ದೇವೇಂದ್ರನ ಅಂತಹ ಎಚ್ಚರಿಕೆಯನ್ನೂ ಎದುರಿಸಿ ದಧೀಚಿಯಿಂದ ಅದರ ಉಪದೇಶ ಪಡೆಯಲು ಅಶ್ವಿನೀದೇವತೆಗಳಿಂದ ತೋರಿಸಲ್ಪಟ್ಟ ಕಾತರತೆ ಪ್ರಯುಕ್ತ ಇನ್ನೊಂದು ಬಗೆಯ ಮಹತ್ತ್ವ ಸ್ಪಷ್ಟವಾಗುವುದು.

### ಶ್ರೀಮದಾಚಾರ್ಯರ ಸಂದೇಶ:

ವಿದ್ಯೆ ಎಷ್ಟೇ ಫಲಶಾಲಿಯಾದರೂ ಆ ವಿದ್ಯೆಯನ್ನು ಉಪದೇಶಿಸಿದ ಗುರುವಿನ ಯೋಗ್ಯತೆಯನ್ನೂ, ಉಪದೇಶ ಪಡೆದ ಶಿಷ್ಯನ ಯೋಗ್ಯತೆಯನ್ನೂ, ಉಪದೇಶದ ಸಂದರ್ಭವನ್ನೂ, ವಿಧಾನವನ್ನೂ ಅವಲಂಬಿಸಿ, ಅದಕ್ಕೆ ಅನುಗುಣವಾಗಿ ಫಲಿಸು ವುದಷ್ಟೇ. ನಾರಾಯಣವರ್ಮದ ಫಲಶ್ರುತಿಗೆ ಸಂಬಂಧಪಟ್ಟೇ ಶ್ರೀಮದಾಚಾರ್ಯ ರು ಯಾವುದೇ ವಿದ್ಯೆ ಅವರ ಫಲಶ್ರುತಿಯಲ್ಲಿ ನಿರೂಪಿಸಲ್ಪಟ್ಟಷ್ಟು ಫಲಪ್ರದವಾಗ ದಿರಲು ನಾಲ್ಕು ಕಾರಣಗಳಿರುವವೆಂದು ಸಂದೇಶಿಸಿದ್ದಾರೆ. ವಿದ್ಯೆಯನ್ನು ಉಪ ದೇಶಿಸಿದ ಗುರು ಅಯೋಗ್ಯನಾಗಿರುವುದು, ಉಪದೇಶ ಪಡೆದ ಶಿಷ್ಯ ಅಯೋಗ್ಯ ನಾಗಿರುವುದು; ಗುರುಶಿಷ್ಯರಿಬ್ಬರೂ ಯೋಗ್ಯರೇ ಆಗಿದ್ದರೂ ಶಿಷ್ಯ ಚೆನ್ನಾಗಿ ಗುರು ಸೇವೆ ಮಾಡದೆಯೇ ವಿದ್ಯೋಪದೇಶವನ್ನು ಪಡೆದಿರುವುದು ಹಾಗೂ ಗುರು ಪ್ರಸನ್ನ ನಾಗದೆ ವಿದ್ಯೋಪದೇಶ ನೀಡಿರುವುದು [1] — ಈ ನಾಲ್ಕರಲ್ಲಿ ಯಾವುದಾದರೊಂದು ಇದ್ದರೂ ವಿದ್ಯೆ ಪೂರ್ಣವಾಗಿ ಫಲಿಸದು.

---

1 ಗುರುಶಿಷ್ಯಯೋರಯೋಗ್ಯತ್ವಾದ್ ಗುರುವೃತ್ತೇರಪೂರ್ತಿತಃ । ಅಪ್ರಸಾದಾದ್ ಗುರೋರ್ವಿದ್ಯಾ ನ ಯಥೋಕ್ತ ಫಲಪ್ರದಾಃ । —ಭಾಗ.ತಾ.ನಿ. 6-8-36

'ನಾರಾಯಣವರ್ಮ'ದ ಬಗ್ಗೆಯೂ ಈ ಮಾತು ಅನ್ವಯವಾಗುವಂತಹದ್ದು. ಆದ್ದರಿಂದ ನಾರಾಯಣವರ್ಮದ ಹೆಚ್ಚಿನ ಉಪಯೋಗ ಪಡೆದುಕೊಳ್ಳಬಯಸುವ ಸಾಧಕರು ಆದಷ್ಟು ಯೋಗ್ಯ ಗುರುಗಳಿಂದ, ತಮ್ಮ ವಿನಯಾದಿ ಗುಣಗಳಿಂದ ಅವರನ್ನು ಸಾಕಷ್ಟು ಪ್ರಸನ್ನರನ್ನಾಗಿಸಿ ಉತ್ತಮ ಸಂದರ್ಭದಲ್ಲಿ ಸಮುಚಿತವಾದ ವಿಧಾನ ದಿಂದ ಅದರ ಉಪದೇಶವನ್ನು ಪಡೆದುಕೊಳ್ಳಬೇಕು—ಎಂದು ಸೂಚಿತವಾಗುವುದು.

## ಪ್ರಕಟನೆಯ ಉದ್ದೇಶ:

'ನಾರಾಯಣವರ್ಮ' ಎಷ್ಟು ಶ್ರೇಷ್ಠವಾದ ಹಾಗೂ ಸಾಧನೆಗೆ ಉಪಯುಕ್ತ ವಾದ ಸ್ತೋತ್ರವೋ ಅಷ್ಟು ಪ್ರಮಾಣದಲ್ಲಿ ಪ್ರಸಿದ್ಧವಾಗಿಲ್ಲ. ಅಂದರೆ ಭಾಗವತದ ಗೋಪೀಗೀತೆ, ಕುಂತೀಕೃತಸ್ತುತಿ, ಗಜೇಂದ್ರಕೃತಸ್ತುತಿ — ಮುಂತಾದವು ಸಾಮಾನ್ಯ ಜನರ ಪ್ರಪಂಚದಲ್ಲಿ ಎಷ್ಟು ವ್ಯಾಪಕವಾಗಿ ಇವೆಯೋ ಅಷ್ಟು ವ್ಯಾಪಕ ಪ್ರಮಾಣದಲ್ಲಿ ನಾರಾಯಣವರ್ಮ ಬಳಕೆಗೆ ಬಂದಿಲ್ಲ. ಅದರ ಮಹತ್ತ್ವ, ಅರ್ಥ ಗಾಂಭೀರ್ಯ—ಇತ್ಯಾದಿಗಳನ್ನು ಚೆನ್ನಾಗಿ ಮನವರಿಕೆ ಮಾಡಿಕೊಳ್ಳದಿರುವುದೇ ಇದಕ್ಕೆ ಕಾರಣವಿರಬಹುದು.

ಇದನ್ನು ಮನಗಂಡು ಸಾಧಕ ಪ್ರಪಂಚದಲ್ಲಿ ನಾರಾಯಣವರ್ಮವನ್ನು ವಿಶೇಷ ವಾಗಿ ಬಳಸಿಕೊಳ್ಳುವಂತಾಗಬೇಕು; ಅದೂ ಯಾಂತ್ರಿಕವಾದ ಪಾರಾಯಣಕ್ಕಾಗಿ ಯಷ್ಟೇ ಬಳಸಿಕೊಳ್ಳಲ್ಪಡದೆ, ಕ್ಷಣ ಕ್ಷಣದಲ್ಲಿ ನಾವು ಪಡೆಯುತ್ತಿರುವ ರಕ್ಷಣೆಗೆ ಸಂಬಂಧಿಸುವ ಅನುಸಂಧಾನಕ್ಕೆ ಪೋಷಕವಾಗುವಂತೆ 'ನಾರಾಯಣವರ್ಮ'ವನ್ನು ಅಳವಡಿಸಿಕೊಳ್ಳುವಂತಾಗಬೇಕು. ಈ ಉದ್ದೇಶಕ್ಕಾಗಿ ನಾರಾಯಣವರ್ಮವನ್ನು ಅನುವಾದಸಹಿತವಾಗಿ ಪ್ರಕಟಿಸುವ ಪ್ರವೃತ್ತಿಯನ್ನು ಕೈಗೊಳ್ಳಲಾಗಿದೆ. ನಾರಾಯಣ ವರ್ಮದ ಅರ್ಥವನ್ನೊದಗಿಸುವುದರ ಜೊತೆಗೆ ಅದರ ಹಿನ್ನೆಲೆ, ಮಹತ್ತ್ವ, ರೂಪ ಗಳ ಉಲ್ಲೇಖಗಳ ಔಚಿತ್ಯ, ವಿಶೇಷಣಗಳ ಪ್ರಯೋಗಗಳ ಸಾರ್ಥಕ್ಯ—ಮುಂತಾ ದವುಗಳ ಮಾಹಿತಿಯನ್ನೂ ಒದಗಿಸಿಕೊಡಬೇಕೆಂದು ಸರಳಾನುವಾದವನ್ನಲ್ಲದೆ ವಿಸ್ತೃತವಾದ ಉಪೋದ್ಘಾತವನ್ನೂ, ಪರಿಶಿಷ್ಟವನ್ನೂ ನೀಡಲಾಗಿದೆ. ಜಿಜ್ಞಾಸು ಗಳ ವಿಶೇಷಾಧ್ಯಯನಕ್ಕಾಗಿ ಅಡಿಟಿಪ್ಪಣಿಯಲ್ಲಿ ವಿಜಯಧ್ವಜೀಯ, ಸತ್ಯಧರ್ಮ ತೀರ್ಥೀಯ ಹಾಗೂ ಚಿಟ್ಟೀ ವೆಂಕಟಾದ್ರಿರಚಿತ ಭಾಗವತ ಟಿಪ್ಪಣಿಗಳ ವಿಶೇಷಾಂಶ ಗಳನ್ನು ಉಲ್ಲೇಖಿಸಲಾಗಿದೆ.

'ನಾರಾಯಣವರ್ಮ' ಕವಚಸ್ತೋತ್ರವೆನಿಸಿದ್ದು, ಅದೇ ಮಾದರಿಯ ಕೆಲವು ಕವಚಸ್ತೋತ್ರಗಳನ್ನೂ, ಅವುಗಳಿಗೆ ಸಂಬಂಧಿಸಿದ ಮಾಹಿತಿಗಳನ್ನೂ ಪ್ರಮೇಯ ಗಳನ್ನೂ ಈ ದ್ವಿತೀಯ ಮುದ್ರಣದಲ್ಲಿ ಸಂಯೋಜಿಸಲಾಗಿದೆ.

# ಕವಚರೂಪದ ಸ್ತೋತ್ರಗಳು

ತನ್ನನ್ನು ತೊಟ್ಟವನ ಪಾಲಿಗೆ ಹೊರಗಿನ ಆಪತ್ತು ತಟ್ಟದಂತೆ ರಕ್ಷಣೆ ನೀಡುವ ಕವಚದ ಮಾದರಿಯಲ್ಲಿ ಸರ್ವತೋಮುಖವಾದ ರಕ್ಷಣೆಯ ಪ್ರಾರ್ಥನೆಗಾಗಿ, ಸ್ತುತಿ ಗಾಗಿ ಹೊರಟ ಸ್ತೋತ್ರಗಳು 'ಕವಚಸ್ತೋತ್ರ'ಗಳೆನಿಸಿವೆ. ಸ್ತೋತ್ರಸಾಹಿತ್ಯದ ಒಂದು ಪ್ರಕಾರವೆನಿಸಿರುವ ಅಂತಹ ಸ್ತೋತ್ರಗಳಲ್ಲಿ ದೇಶಕ್ಕೆ, ಕಾಲಕ್ಕೆ ಹಾಗೂ ದೇಹಕ್ಕೆ ಸಂಬಂಧಿಸುವಂತೆ ಸರ್ವತೋಮುಖವಾದ ರಕ್ಷಣೆಯನ್ನು ಕೇಳಿಕೊಳ್ಳ ಲಾಗುವುದು.

ಕವಚಸ್ತೋತ್ರಗಳಲ್ಲಿ ಕೆಲವು ದೇವತೆಯೊಬ್ಬ ತನ್ನ ಬೇರೆ ಬೇರೆ ರೂಪದಿಂದ ಬೇರೆ ಬೇರೆ ದೇಶದಲ್ಲಿ, ಕಾಲದಲ್ಲಿ, ದೇಹದ ಅಂಗಾಂಗಗಳಲ್ಲಿ ಇದ್ದುಕೊಂಡು ರಕ್ಷಣೆ ನೀಡುತ್ತಿರುವ ಒಗ್ಗೆ ಸಲ್ಲಿಸಲಾಗುವ ಸ್ತುತಿಯನ್ನು ಒಳಗೊಂಡಿದ್ದರೆ, ಮತ್ತೆ ಕೆಲವು ದೇವತೆಯೊಬ್ಬ ತನ್ನ ಒಂದೇ ರೂಪದಿಂದ ಬೇರೆ ಬೇರೆ ದೇಶ ಕಾಲಗಳಲ್ಲಿದ್ದು ರಕ್ಷಣೆ ನೀಡುವುದನ್ನು ಆಯಾ ಪ್ರಸಂಗಕ್ಕೆ ಹೊಂದಿಕೆಯಾಗುವ ಅವನ ಬೇರೆ ಬೇರೆ ಹೆಸರಿನ ಉಲ್ಲೇಖದೊಂದಿಗೆ ನಡೆಸಲಾಗುವ ಸ್ತುತಿಯನ್ನು ಒಳಗೊಂಡಿರುತ್ತವೆ. ಹೆಚ್ಚಿನ ಕವಚಸ್ತೋತ್ರಗಳೆಲ್ಲ ಈ ಎರಡನೇ ಮಾದರಿಯವುಗಳೇ ಆಗಿದ್ದು, ಮೊದ ಲನೆಯ ಮಾದರಿಯ ಸ್ತೋತ್ರಗಳು ಬಹಳ ವಿರಳ.

**ಹನ್ನೆರಡಕ್ಕಿಂತಲೂ ಅಧಿಕ ಕವಚಗಳು :**

ಸಾತ್ತ್ವಿಕಸ್ತೋತ್ರಸಾಹಿತ್ಯ ಪ್ರಪಂಚದಲ್ಲಿ ಸುಮಾರು ಹನ್ನೆರಡಕ್ಕಿಂತಲೂ ಅಧಿಕ ಕವಚಸ್ತೋತ್ರಗಳ ಪ್ರಸ್ತಾವ ಬಂದಿದೆ.

ಅಥರ್ವವೇದದಲ್ಲಿ ಪ್ರಸ್ತುತವಾಗಿರುವ ಹಯಗ್ರೀವ ಕವಚ, ಭಾಗ ವತದಲ್ಲಿ ಪ್ರಸ್ತುತವಾಗಿರುವ ನಾರಾಯಣ ಕವಚ, ಗರುಡಪುರಾಣದಲ್ಲಿ ಪ್ರಸ್ತುತವಾಗಿರುವ ವಿಷ್ಣುಕವಚ, ಶ್ರೀ ವಿಷ್ಣುಪಂಜರಸ್ತೋತ್ರ, ಭಕ್ತ ಪ್ರಹ್ಲಾದನಿಂದ ಉಕ್ತವಾದ ನೃಸಿಂಹಕವಚ, 'ಬುಧ ಕೌಶಿಕ ಸಂಗ್ರ ಹೀತವಾದ ಶ್ರೀರಾಮರಕ್ಷಾಸ್ತೋತ್ರ, ಭಾಗವತದಲ್ಲಿ ಪ್ರಸ್ತುತವಾದ ಬಾಲರಕ್ಷಾಸ್ತೋತ್ರ, ಶ್ರೀ ವಾದಿರಾಜತೀರ್ಥರಿಂದ ರಚಿತವಾದ ಶ್ರೀ ರಘುನಾಥ

ಕವಚ, ಆಗ್ನೇಯ ಪುರಾಣದಲ್ಲಿ ಪ್ರಸ್ತುತವಾದ ಶ್ರೀ ವೇಂಕಟೇಶಪಂಜರ ಸ್ತೋತ್ರ, ಶ್ರೀಮನ್ನಾರಾಯಣ ಪಂಡಿತಾಚಾರ್ಯ ವಿರಚಿತ ಶ್ರೀ ಮಧ್ವಕವಚ, ಬ್ರಹ್ಮಾಂಡ ಪುರಾಣದಲ್ಲಿ ಪ್ರಸ್ತುತವಾದ ತುಲಸೀಕವಚ, ಬ್ರಹ್ಮವೈವರ್ತದ ಬ್ರಹ್ಮಖಂಡದಲ್ಲಿ ಪ್ರಸ್ತುತವಾದ ಮಹೇಶ್ವರ ಕವಚ, ಬ್ರಹ್ಮಾಂಡ ಪುರಾಣದಲ್ಲಿ ಪ್ರಸ್ತುತವಾದ ಆದಿತ್ಯ ಕವಚ—ಹೀಗೆ ಸುಮಾರು ಹನ್ನೆರಡು ಹದಿಮೂರು ಕವಚಗಳು ಪ್ರಸ್ತಾಪಿಸಲ್ಪಟ್ಟಿವೆ. ಇವುಗಳಲ್ಲಿ ನಾರಾಯಣವರ್ಮ ಒಂದನ್ನು ಬಿಟ್ಟರೆ ಉಳಿದೆಲ್ಲವು ಸುತ್ತ ಇದ್ದು ರಕ್ಷಿಸು ತ್ತಿರುವ ದೈವೀಶಕ್ತಿಯನ್ನು ಆಯಾ ದೇಶಕಾಲಾದಿಗಳಿಗೆ ಅನ್ವರ್ಥಕವೆನಿಸುವ ನಾಮದ ಮೂಲಕ ಅನುಸಂಧಾನ ಮಾಡಿಕೊಳ್ಳಬೇಕೆಂಬ ದೃಷ್ಟಿಯಿಂದಷ್ಟೇ ಹೊರಟವು. ಇತರ ದೇವತೆಗಳಿಗೆ ಸಂಬಂಧಿಸಿರುವ ಕವಚಗಳನ್ನು ಬಿಟ್ಟು ಭಗವದ್ರೂಪಗಳಿಗೆ ಸಂಬಂಧಿಸುವ ಕವಚಗಳ ಪೂರ್ಣಪಾಠವನ್ನು ಸ್ಥೂಲವಾದ ಅಭಿಪ್ರಾಯದಿಂದ ಸಹಿತವಾಗಿ ಇಲ್ಲಿ ಸಂಗ್ರಹಿಸಲಾಗಿದೆ.

ಪರಿಶಿಷ್ಟದಲ್ಲಿ ಉಪನಿಷತ್ತುಗಳು ನಿರೂಪಿಸಿರುವಂತೆ ನಮ್ಮ ದೇಹ, ಸ್ವರೂಪ, ಅವಯವಾದಿಗಳಲ್ಲಿ ನೆಲೆಸಿದ್ದು ರಕ್ಷಣೆಯಲ್ಲಿ ಮಗ್ನನಾಗಿರುವ ಭಗವಂತನ ರೂಪಗಳ ಮಾಹಿತಿಯನ್ನು ನೀಡಲಾಗಿದೆ. ಸಾಧಕರಿಗೆ ಇದು ತುಂಬ ಉಪಯುಕ್ತ ವಾದೀತೆಂದು ಭಾವನೆ.

**ಕೃತಜ್ಞತೆ**

* ಈ ಕೃತಿಯ ಹಸ್ತಪ್ರತಿಯನ್ನು ಪರಿಶೀಲಿಸಿ ಅಲ್ಲಲ್ಲಿ ಸೂಕ್ತ ಸಲಹೆ ಸೂಚನೆ ಗಳನ್ನಿತ್ತ ಶ್ರೀ ರಾಮನಾಥಾಚಾರ್ಯರಿಗೆ........

* ಅಂದವಾಗಿ ಮುದ್ರಿಸಿಕೊಟ್ಟ "ಸುಗುಣಾ ಪ್ರಿಂಟರ್ಸ್"ನ ಬಂಧುಗಳಿಗೆ........

ಕೃತಜ್ಞತೆ.

**ಸಗ್ರಿ ರಾಘವೇಂದ್ರ ಉಪಾಧ್ಯಾಯ**
ಪರವಿದ್ಯಾ ಪ್ರಕಾಶನ
ಶವ್ಯಾಶ್ರಾಸ
ಉಡುಪಿ

ಬಹುಧಾನ್ಯ ಶ್ರಾವಣಶುದ್ಧ
ದ್ವಿತೀಯಾ

# ನೃಸಿಂಹಾರ್ಪಣಮಸ್ತು



ವಿದಿಕ್ಷು ದಿಕ್ಷೂರ್ಧ್ವಮಧಃ ಸಮಂತಾತ್
ಅಂತರ್ಬಹಿರ್ಭಗವಾನ್ ನಾರಸಿಂಹಃ ।
ಪ್ರಹಾಪಯಂ ಲೋಕಭಯಂ ಸ್ವನೇನ
ಸ್ವತೇಜಸಾ ಗ್ರಸ್ತಸಮಸ್ತತೇಜಾಃ ॥

ತನ್ನ ತೇಜಸ್ಸಿನಿಂದ ಸೂರ್ಯಾದಿಗಳ ತೇಜಸ್ಸು ಮಸುಕು ಆಗುವಂತೆ ಮಾಡಿರುವ ತನ್ನ ಗರ್ಜನೆಯಿಂದ ಸಜ್ಜನರ ಭಯವನ್ನು ಪರಿಹರಿಸುವ ಭಗವಾನ್ ನರಸಿಂಹನು ದಿಕ್ಕುಗಳಲ್ಲಿ ವಿದಿಕ್ಕುಗಳಲ್ಲಿ ಮೇಲೆ, ಕೆಳಗೆ, ಒಳಗೆ, ಹೊರಗೆ—ಎಲ್ಲೆಡೆ ನನ್ನನ್ನು ಕಾಪಾಡಲಿ.

ಹೀಗೆ ಭಕ್ತರಿಂದ ಪ್ರಾರ್ಥಿತನಾಗಿ ಅವರ ಭಯವನ್ನು, ಆಪತ್ತುಗಳನ್ನು ಪರಿಹರಿಸಿ ರಕ್ಷಣೆಯನ್ನು ನಡೆಸುತ್ತಿರುವ, ನಾರಾಯಣವರ್ಮವೇ ಮುಂತಾದ ಕವಚಸ್ತೋತ್ರಗಳಿಂದ ಮುಖ್ಯ ಪ್ರತಿಪಾದ್ಯನಾದ ಲಕ್ಷ್ಮೀನರಸಿಂಹನ ಪಾದಾರವಿಂದದಲ್ಲಿ ಸಮರ್ಪಿತ.

## ಪ್ರಸ್ತಾವನಾ :

**ರಾಜೋವಾಚ[1]—**

**ಯಯಾ ಗುಪ್ತಃ ಸಹಸ್ರಾಕ್ಷಃ ಸವಾಹಾನ್ ರಿಪುಸೈನಿಕಾನ್[2] ।**
**ಕ್ರೀಡನ್ನಿವ ವಿನಿರ್ಜಿತ್ಯ ತ್ರಿಲೋಕ್ಯಾಂ[3] ಬುಭುಜೇ ಶ್ರಿಯಮ್ ॥ ೧ ॥**
**ಭಗವಂಸ್ತನ್ಮಮಾಖ್ಯಾಹಿ ವರ್ಮ ನಾರಾಯಣಾತ್ಮಕಮ್ ।**
**ಯಥಾ[4]ಽಽತತಾಯಿನಃ ಶತ್ರೂನ್ ಯೇನ ಗುಪ್ತೋಽಜಯನ್ಮೃಧೇ॥೨॥**

ಪರೀಕ್ಷಿದ್ರಾಜನು ವಿಚಾರಿಸಿದನು– ದೇವೇಂದ್ರನು ಯಾವ ನಾರಾಯಣವರ್ಮ ವಿದ್ಯೆಯಿಂದ ರಕ್ಷಿತನಾಗಿ ವಾಹನಸಹಿತರಾದ ಶತ್ರುಸೇನಾನಾಯಕರನ್ನು ಆಟಆಡು ವಂತೆ ಅನಾಯಾಸವಾಗಿ ಸೋಲಿಸಿ ಮೂರೂ ಲೋಕಗಳ ಸಂಪತ್ತನ್ನು ಅನುಭವಿಸಿ ದನು? ಹೇ ಭಗವನ್! ದೇವೇಂದ್ರನು ಶ್ರೀಮನ್ನಾರಾಯಣನ ರೂಪಗಳಿಂದ ವ್ಯಾಪ್ತವಾದ ನಾರಾಯಣವರ್ಮದಿಂದ ರಕ್ಷಿತನಾಗಿ ಬೆಂಕಿ ಕೊಡುವುದೇ ಮುಂತಾದ ಅಪರಾಧಗಳಿಂದಾಗಿ 'ಆತತಾಯಿ'ಗಳೆನಿಸಿರುವ[5] ಶತ್ರುಗಳನ್ನು ಹೇಗೆ ಜಯಿಸಿರುವನು ?

**ಶ್ರೀಶುಕ ಉವಾಚ—**

**ವೃತಃ ಪುರೋಹಿತ[6]ಸ್ತ್ವಾಷ್ಟ್ರೋ ಮಹೇಂದ್ರಾಯಾನುಪೃಚ್ಛತೇ ।**
**ನಾರಾಯಣಾಖ್ಯಂ ವರ್ಮಾಹ ತದಿಹೈಕಮನಾಃ ಶೃಣು ॥ ೩ ॥**

ಶ್ರೀಶುಕಾಚಾರ್ಯರು ಸಮಾಧಾನಿಸಿದರು—ತಮ್ಮ ಪುರೋಹಿತರಾಗಿ ವರಿಸ ಲ್ಪಟ್ಟ ತ್ವಷ್ಟೃವಿನ ಪುತ್ರರಾದ ವಿಶ್ವರೂಪಾಚಾರ್ಯರು ತಮ್ಮನ್ನು ಕೇಳಿಕೊಂಡ ಮಹೇಂದ್ರನಿಗೆ ನಾರಾಯಣವರ್ಮವನ್ನು ಉಪದೇಶಿಸಿದರು. ಏಕಾಗ್ರತೆಯಿಂದ ಅದನ್ನು ಕೇಳು.

---

1 ಮೂಲಕೋಶೇ ಉವಾಚ ಇತಿ ನ ಪಠ್ಯತೇ ।
2 ಸೈನಿಕಾನ್ ಸೇನಾನಾಯಕಾನ್ – ವಿಜಯ
3 ತ್ರಿಲೋಕ್ಯಾ – ವಿಜಯ ತ್ರೈಲೋಕ್ಯಾಂ – ತ್ರಿಲೋಕಸಂಬಂಧಿನೀಂ - ಚಿಟ್ಟೀ
4 ವರ್ಮಸ್ವರೂಪಂ ಪೃಷ್ಟ್ವಾ ಜಯಪ್ರಕಾರಂ ಪೃಚ್ಛತಿ - ಯಥೇತಿ - ಚಿಟ್ಟೀ ।
5 ಅಗ್ನಿದೋ ಗರದಶ್ಚೈವ ಶಸ್ತ್ರಪಾಣಿರ್ಧನಾಪಹಃ ।
ಕ್ಷೇತ್ರದಾರಾಪಹಾರೀ ಚ ಷಡೇತೇ ಹ್ಯಾತತಾಯಿನಃ
—ಮ. ಭಾರ. ಭೀಷ್ಮಪ. 107–110
6 ಪುರೋಹಿತೋ ವೃತಸ್ತತ್ತ್ವೇನ ವೃತಃ —ಸತ್ಯ.

# ಪೂರ್ವಸಿದ್ಧತೆ :

ವಿಶ್ವರೂಪ ಉವಾಚ—

**ಧೌತಾಂಘ್ರಿಪಾಣಿರಾಚಮ್ಯ ಸಪವಿತ್ರ ಉದಙ್ಮುಖಃ ।**
**ಕೃತಸ್ವಾಂಗಕರನ್ಯಾಸೋ ಮಂತ್ರಾಭ್ಯಾಂ ವಾಗ್ಯತಃ ಶುಚಿಃ ॥ ೪ ॥**
**ನಾರಾಯಣಮಯಂ ವರ್ಮ ಸನ್ನಹ್ಯೇದ್ ಭಯ ಆಗತೇ ।**
**ದೈವಭೂತಾತ್ಮಕರ್ಮಭ್ಯೋ ನಾರಾಯಣಮಯಃ ಪುಮಾನ್ ॥ ೫ ॥**

ವಿಶ್ವರೂಪಾಚಾರ್ಯರು ಉಪದೇಶಿಸಿದರು— [ಮುಂದಿನ ಎಂಟು ಪದ್ಯಗಳಲ್ಲಿ ನಾರಾಯಣವರ್ಮದ ಜಪದ ಅಂಗಗಳನ್ನು ಅವುಗಳ ಸಹಕಾರಿಗಳಿಂದ ಸಹಿತವಾಗಿ ತೋರಿಸಿಕೊಡಲಾಗುವುದು. 1]

ದೈವಪ್ರಯುಕ್ತವಾದ ಅನಾವೃಷ್ಟ್ಯಾದಿ ಭಯ, ಭೂತಪ್ರಯುಕ್ತವಾದ ಉನ್ಮಾದಾದಿ ಭಯ ಹಾಗೂ ತನ್ನ ಪ್ರಾರಬ್ಧಕರ್ಮಪ್ರಯುಕ್ತವಾದ ರೋಗಾದಿಗಳ ಭಯ 2 ಇವು ಸಂಭವಿಸುತ್ತಿರಲು 3 ಕೈಕಾಲುಗಳನ್ನು ತೊಳೆದುಕೊಂಡು ಪವಿತ್ರವನ್ನು ಧರಿಸಿ ಉತ್ತರಾಭಿಮುಖನಾಗಿ ಕುಳಿತು ನಾರಾಯಣಾಷ್ಟಾಕ್ಷರ ಹಾಗೂ ವಿಷ್ಣು ಷಡಕ್ಷರ ಮಂತ್ರಗಳಿಂದ ಅಂಗನ್ಯಾಸವನ್ನೂ 4, ವಾಸುದೇವ ದ್ವಾದಶಾಕ್ಷರ ಮಂತ್ರದಿಂದ ಕರನ್ಯಾಸವನ್ನೂ ಮಾಡಿ ಮಂತ್ರದ ಆಯಾ ವರ್ಣ ಪ್ರತಿಪಾದ್ಯರೂಪಗಳನ್ನು ಮನನ 5

---

1 ತಜ್ಜಪಾನಾಂ ಅಂಗಂ ಸಪರಿಕರಂ ಧೌತೇತ್ಯಾರಭ್ಯಾಷ್ಟಭಿಃ ಶ್ಲೋಕೈಃ ಸ್ಪಷ್ಟಯತಿ– ಧೌತಾಂಘ್ರಿಪಾಣಿರಿತಿ । —ಸತ್ಯ.

2 ದೈವಾದ್ ಭಯ ಅನಾವೃಷ್ಟಿಲಕ್ಷಣೇ, ಭೂತೇಭ್ಯೋ ಭಯೇ ಉನ್ಮಾದಾದಿಲಕ್ಷಣೇ ಆತ್ಮಕರ್ಮಣಾ ಕುಷ್ಠಭಗಂದರಾದಿಲಕ್ಷಣ ಇತ್ಯರ್ಥಃ । —ವಿಜಯ.

* ಆತ್ಮಕರ್ಮಜಂ ಪ್ರಾಚೀನಕರ್ಮಾಯತ್ತಮಪಸ್ಮಾರಾದಿ ಭಯಂವಾ —ಸತ್ಯ.

3 ವರ್ತಮಾನಸಾಮೀಪ್ಯಾದ್ವರ್ತಮಾನವದ್ವ್ಯಪದೇಶ ಇತ್ಯುಕ್ತೇಃ ಆಗತೇ ಇತ್ಯುಕ್ತಿಃ —ಸತ್ಯ.

4 ಉತ್ತರತ್ರ ದ್ವಾಭ್ಯಾಂ ಮಂತ್ರಾಭ್ಯಾಂ ಅಂಗನ್ಯಾಸಸ್ಯ ಏಕೇನ ಮಂತ್ರೇಣ ಚ ಕರನ್ಯಾಸಸ್ಯ ಚೋಕ್ತೇಃ ಕರನ್ಯಾಸಾಪೇಕ್ಷಯಾ ಅಂಗನ್ಯಾಸಸ್ಯ ವೈಶಿಷ್ಟ್ಯದ್ಯೋತನಾರ್ಥಂ ಮಂತ್ರಾಭ್ಯಾ-ಮಿತಿ ದ್ವಿವಚನಶಬ್ದಸ್ಯ ಉಲ್ಲೇಖಃ ಕೃತಃ —ರಾಮ

* ಮಂತ್ರಾಭ್ಯಾಂ ನಾರಾಯಣಾಷ್ಟಾಕ್ಷರ ವಾಸುದೇವ ದ್ವಾದಶಾಕ್ಷರಾಭ್ಯಾಂ —ಚೆಟ್ಟೀ

5 ವಾಗ್ಯತಃ ನ್ಯಾಸಕಾಲೇ ತತ್ತದ್ವರ್ಣೋಚ್ಚಾರಣಂ ವಿಹಾಯ ತತ್ತದ್ವರ್ಣಪ್ರತಿಪಾದ್ಯ-ರೂಪಾಣಾಂ ಮನನಪರಃ ಸನ್ನಿತ್ಯರ್ಥಃ —ರಾಮ

ಮಾಡುತ್ತ, ಶುಚಿಯಾಗಿದ್ದು ನಾರಾಯಣನೇ ಸರ್ವೋತ್ತಮನಾದವನೆಂಬ ಅನುಸಂಧಾನವುಳ್ಳವನಾಗಿ [1] ನಾರಾಯಣನ ಸನ್ನಿಧಾನಾತಿಶಯವನ್ನು ಹೊಂದಿಸುವ [2] ನಾರಾಯಣವರ್ಮವನ್ನು ಧರಿಸಿಕೊಳ್ಳಬೇಕು [3].

## ನಾರಾಯಣಾಷ್ಟಾಕ್ಷರದಿಂದ ಅಂಗನ್ಯಾಸ :

**ಪಾದಯೋರ್ಜಾನುನೋರೂರ್ವೋರುದರೇ ಹೃದ್ಯಥೋರಸಿ ।**
**ಮುಖೇ ಶಿರಸ್ಯಾನುಪೂರ್ವ್ಯಾದೋಂಕಾರಾದೀನಿ ವಿನ್ಯಸೇತ್ ॥ ೬ ॥**
**ಓಂ ನಮೋ ನಾರಾಯಣಾಯೇತಿ ವಿಪರ್ಯಯಮಥಾಪಿ ವಾ ।**

[ಪಾದಾದಿ ಎಂಟು ಅಂಗಗಳಲ್ಲಿ ಅಷ್ಟಾಕ್ಷರ ಮಂತ್ರದ ಅಕ್ಷರಗಳಿಂದ ನ್ಯಾಸವನ್ನು ಹೇಳಲಾಗುವುದು]–ಪಾದಗಳಲ್ಲಿ, ಕಾಲ್ಗಂಟುಗಳಲ್ಲಿ, ತೊಡೆಗಳಲ್ಲಿ, ಹೊಟ್ಟೆಯಲ್ಲಿ (ನಾಭಿಯಲ್ಲಿ), ಹೃದಯದಲ್ಲಿ, ಎದೆಯಲ್ಲಿ, ಮುಖದಲ್ಲಿ (ಬಾಯಿಯಲ್ಲಿ) ಹಾಗೂ ತಲೆಯಲ್ಲಿ—ಹೀಗೆ ಎಂಟು ಅಂಗಗಳಲ್ಲಿ [4] 'ಓಂ ನಮೋ ನಾರಾಯಣಾಯ' ಎಂಬ ನಾರಾಯಣಾಷ್ಟಾಕ್ಷರ ಮಂತ್ರದ ಎಂಟು ಅಕ್ಷರಗಳಿಂದ ನ್ಯಾಸವನ್ನು ಮಾಡಬೇಕು. ಮಂತ್ರ ಶಾಸ್ತ್ರೋಕ್ತ ಕ್ರಮವನ್ನು [5], ಸಂಪ್ರದಾಯ ಕ್ರಮವನ್ನು ಅನುಸರಿಸಿ ಮಾಡಬೇಕು.

---

* ವಾಗ್ಯತಃ – ಮೌನೀ —ಚಿಟ್ಟೀ

* ಅಸಂಭಾಷ್ಯಾಸಂಭಾಷಣಮೇವ ವಾಚೋಯಮನಂ ನಾಮ —ಸತ್ಯ

1 ಕೀದೃಶಃ ಸನ್? ನಾರಾಯಣಮಯೋ ಭಗವಾನ್ ಸರ್ವೋತ್ತಮ ಇತಿ ಜ್ಞಾನವಾನ್–ತದುಕ್ತಂ–ಮಯಂ ಪ್ರಧಾನಮುದ್ದಿಷ್ಟಂ ಪ್ರಾಧಾನ್ಯಂ ಯೈರ್ಹರೇರ್ಮತಮ್ । ಭಗವನ್ಮಯಾಸ್ತೇ ವಿಜ್ಞೇಯಾಸ್ತೇ ಮುಚ್ಯಂತೇ ನ ಚಾಪರ ಇತಿ —ಚಿಟ್ಟೀ

2 ನಾರಾಯಣಮಯಂ ನಾರಾಯಣಸಾನ್ನಿಧ್ಯಪ್ರಾಚುರ್ಯಪ್ರಾಪಕಮ್ —ಸತ್ಯ

3 ಸನ್ನಹ್ಯೇದ್ ಬಧ್ನೀಯಾತ್ —ಸತ್ಯ

4 ಪಜ್ಞಾನುನಾಭಿಹೃದಯವಾಙ್ನಾಸಾನೇತ್ರಕೇಷು ಚ ।
ಅಷ್ಟಾಕ್ಷರಾಣಾಂ ನ್ಯಾಸಃ ಸ್ಯಾತ್ .......ಇತಿ ತಂತ್ರಸಾರಸಂಗ್ರಹೇ (೧-೩೨) ನಿರ್ದಿಷ್ಟೇ ನ್ಯಾಸಕ್ರಮೇ ನ್ಯಾಸಸ್ಥಾನತ್ವೇನ ಪರಿಗಣಿತಾನಿ ನಾಸಾ ನೇತ್ರೇ ಚ ಪರಿತ್ಯಜ್ಯ ಅತ್ರ ಊರೂ ಉರಶ್ಚ ಪರಿಗಣಿತಾನಿ ।

5 ಆನುಪೂರ್ವ್ಯಾತ್ ಮಂತ್ರಶಾಸ್ತ್ರೋಕ್ತಕ್ರಮಮನುಸೃತ್ಯ —ಸತ್ಯ

* ಆನುಪೂರ್ವ್ಯಾತ್ ಸಂಪ್ರದಾಯಕ್ರಮಾತ್ —ವಿಜಯ

ಓಂಕಾರರೂಪವಾದ ಪ್ರಣವವನ್ನು ಪ್ರತಿಯೊಂದು ಅಕ್ಷರದ ಆದಿಯಲ್ಲಿ ಹಾಗೂ ಕೊನೆಯಲ್ಲಿ ಪಠಿಸಿ [1], ಅಕ್ಷರಕ್ಕೆ ಬಿಂದುವನ್ನು ಸೇರಿಸಿ [2], ಆಯಾ ಅಕ್ಷರದ ಮೂಲಕ ನ್ಯಾಸವನ್ನು ನಡೆಸಬೇಕು. ಇದು ಸಂಹಾರನ್ಯಾಸ ಎನಿಸಿದೆ. ಪಾದದಿಂದ ತಲೆಯ ವರೆಗಿನ ಅಂಗಗಳಲ್ಲಿ ಕ್ರಮವಾಗಿ ನ್ಯಾಸ ನಡೆಸುವ ಬದಲು, ಇದಕ್ಕೆ ವಿಪರೀತ ವಾಗಿ ತಲೆಯಿಂದ ಪ್ರಾರಂಭಿಸಿ ಪಾದದ ವರೆಗಿನ ಅಂಗಗಳಲ್ಲಿ ಕ್ರಮವಾಗಿ ನ್ಯಾಸ ನಡೆಸಿದರೆ ಅದು ಸೃಷ್ಟಿನ್ಯಾಸ ಎನಿಸುವುದು. ಪಾದದಿಂದ ಪ್ರಾರಂಭಿಸಿ ಉದರದ ವರೆಗಿನ ಅಂಗಗಳಲ್ಲಿ ನ್ಯಾಸ ನಡೆಸಿ ಮತ್ತೆ ಶಿರದಿಂದ ಪ್ರಾರಂಭಿಸಿ, ಹೃದಯದ ವರೆಗಿನ ಅಂಗಗಳಲ್ಲಿ ನ್ಯಾಸವನ್ನು ನಡೆಸಿದಾಗ ಈ ನ್ಯಾಸವು 'ಸ್ಥಿತಿನ್ಯಾಸ' [3] ಎನಿಸು ವುದು. ಈ ಮೂರು ನ್ಯಾಸಗಳನ್ನೂ ನಾರಾಯಣಾಷ್ಟಾಕ್ಷರ ಮಂತ್ರದ ವರ್ಣ ಗಳಿಂದ ನಡೆಸಬೇಕು. [4]

[ನಾರಾಯಣಾಷ್ಟಾಕ್ಷರ ಮಂತ್ರದ ಅಕ್ಷರಗಳಿಂದ ನಡೆಸಬೇಕಾದ ಅಂಗನ್ಯಾಸದ (ಸಂಹಾರನ್ಯಾಸ) ಕ್ರಮದ ವಿವರಣೆ— (ಪಾದಗಳಲ್ಲಿ ವಿಶ್ವನನ್ನು ಧ್ಯಾನಿಸುತ್ತ [5]) ಓಂ ಓಂ ಓಂ (ಕಾಲ್ಗಂಟುಗಳಲ್ಲಿ ತೈಜಸನನ್ನು ಧ್ಯಾನಿಸುತ್ತ) ಓಂ ನಂ ಓಂ (ತೊಡೆ ಗಳಲ್ಲಿ ಪ್ರಾಜ್ಞನನ್ನು ಧ್ಯಾನಿಸುತ್ತ) ಓಂ ಮೋಂ ಓಂ (ಹೊಕ್ಕುಳಲ್ಲಿ ತುರ್ಯನನ್ನು ಧ್ಯಾನಿಸುತ್ತ) ಓಂ ನಾಂ ಓಂ (ಹೃದಯದಲ್ಲಿ ಆತ್ಮನನ್ನು ಧ್ಯಾನಿಸುತ್ತ) ಓಂ ರಾಂ ಓಂ (ಎದೆಯಲ್ಲಿ ಅಂತರಾತ್ಮನನ್ನು ಧ್ಯಾನಿಸುತ್ತ) ಓಂ ಯಂ ಓಂ (ಬಾಯಿಯಲ್ಲಿ

---

* ಆನುಪೂರ್ವ್ಯಾತ್ ವಿನ್ಯಸೇದಿತ್ಯನೇನ ಸೃಷ್ಟಿನ್ಯಾಸಃ ವಿಪರ್ಯಯಮಿತ್ಯನೇನ ಸಂಹಾರ- ನ್ಯಾಸಃ ಅಥಾಪಿ ವೇತ್ಯನೇನ ಸ್ಥಿತಿನ್ಯಾಸಶ್ಚ ಸೂಚಿತಃ —ರಾಮ

1 ಪ್ರಣವಸಂಪುಟಿತಮೋಂಕಾರಾದ್ಯೇಕೈಕಮಕ್ಷರಂ ಪಾದಾದ್ಯಷ್ಟಾಂಗೇಷ್ವಾನುಪೂರ್ವ್ಯಾತ್ ಯಥಾಕ್ರಮಂ ವಿನ್ಯಸೇತ್ —ಚಿಟ್ಟೀ.

2 ವಿನ್ಯಸೇದ್ವರ್ಣಮೇಕೈಕಂ ಬಿಂದ್ವಂತವತ್ ।

3 ಪಾದಾದಿಶಿರೋಂತನ್ಯಾಸಃ ಸಂಹಾರನ್ಯಾಸಃ । ಶಿರ ಆದಿ ಪಾದಾಂತ ಉತ್ಪತ್ತಿನ್ಯಾಸಃ । ಪಾದಾದ್ಯುದರಾಂತಂ ತತಃ ಶಿರ ಆದಿ ಹೃದಯಾಂತಂ ನ್ಯಾಸಃ ಸ್ಥಿತಿನ್ಯಾಸಃ ।

4 ಅಥಾಪೀತ್ಯನೇನ ಸ್ಥಿತಿನ್ಯಾಸಮಪಿ ಸಮುಚ್ಚಿನೋತಿ ।
ವಾಶಬ್ದೋ ನ ವಿಕಲ್ಪಾರ್ಥಃ । ಕಿಂತು ಸಮುಚ್ಚಯಾರ್ಥಃ ।
ಸರ್ವಾಶ್ರಮಿಣಾಮಪಿ ನ್ಯಾಸತ್ರಯಸ್ಯ ಕರ್ತವ್ಯತ್ವಾತ್ । —ಚಿಟ್ಟೀ.

5 ನ್ಯಸನೀಯಂ ಚ ತದ್ವರ್ಣದೇವತಾ ಧ್ಯಾನಪೂರ್ವಕಂ (ತಂ. ಸಾ. ಸಂ. 1-31) ಇತಿ ನಿರ್ದೇಶಾನುಸಾರೇಣ ತತ್ತದ್ವರ್ಣೈಃ ನ್ಯಾಸಕಾಲೇ ತತ್ತದ್ವರ್ಣಪ್ರತಿಪಾದ್ಯಂ ಭಗವದ್ರೂಪಂ ಧ್ಯಾಯೇತ್ ।

ಪರಮಾತ್ಮನನ್ನು ಧ್ಯಾನಿಸುತ್ತ) ಓಂ ಣಾಂ ಓಂ (ನೆತ್ತಿಯಲ್ಲಿ ಜ್ಞಾನಾತ್ಮನನ್ನು ಧ್ಯಾನಿಸುತ್ತ) ಓಂ ಯಂ ಓಂ—ಎಂದು ನ್ಯಾಸವನ್ನು ನಡೆಸಬೇಕು.]

## ವಾಸುದೇವದ್ವಾದಶಾಕ್ಷರ ಮಂತ್ರದ ವರ್ಣಗಳಿಂದ ಕರನ್ಯಾಸ

**ಕರನ್ಯಾಸಂ ತತಃ ಕುರ್ಯಾದ್ ದ್ವಾದಶಾಕ್ಷರವಿದ್ಯಯಾ ॥**
**ಪ್ರಣವಾದಿಯಕಾರಾಂತಮಂಗುಲ್ಯಂಗುಷ್ಠಪರ್ವಸು ।**

ಅಂಗನ್ಯಾಸದ ಬಳಿಕ ವಾಸುದೇವ ದ್ವಾದಶಾಕ್ಷರ ಮಂತ್ರದ ಓಂಕಾರದಿಂದ ಪ್ರಾರಂಭಿಸಿ ಯಕಾರದ ವರೆಗಿನ ಹನ್ನೆರಡು ಅಕ್ಷರಗಳನ್ನು ಓಂಕಾರದಿಂದ ಸಂಪುಟಿತಗಳನ್ನಾಗಿ ಮಾಡಿಕೊಂಡು ಬಲಗೈಯ ತೋರ್ಬೆರಳಿನಿಂದ ಪ್ರಾರಂಭಿಸಿ ಎಡಗೈಯ ತೋರ್ಬೆರಳಿನವರೆಗೆ ಎಂಟು ಬೆರಳುಗಳ ತುದಿ ಭಾಗಗಳಲ್ಲಿ ಎಂಟು ಅಕ್ಷರಗಳನ್ನೂ, ಉಳಿದ ನಾಲ್ಕು ಅಕ್ಷರಗಳನ್ನು ಹೆಬ್ಬೆರಳುಗಳ ಕೆಳಗಿನ ಹಾಗೂ ಮೇಲಿನ ಸಂಧಿಗಳಲ್ಲಿ ನ್ಯಾಸ ಮಾಡಬೇಕು. [1]

[ವಾಸುದೇವದ್ವಾದಶಾಕ್ಷರ ಮಂತ್ರದ ವರ್ಣಗಳಿಂದ ನಡೆಸಬೇಕಾದ ಕರ ನ್ಯಾಸದ ಕ್ರಮದ ವಿವರ—

(ಬಲಗೈಯ ತೋರ್ಬೆರಳ ತುದಿಯಲ್ಲಿ ಕೇಶವನನ್ನು ಧ್ಯಾನಿಸುತ್ತ) ಓಂ ಓಂ ಓಂ (ಬಲಗೈಯ ಮಧ್ಯಬೆರಳಲ್ಲಿ ನಾರಾಯಣನನ್ನು ಧ್ಯಾನಿಸುತ್ತ) ಓಂ ನಂ ಓಂ (ಬಲ ಗೈಯ ಉಂಗುರಬೆರಳಲ್ಲಿ ಮಾಧವನನ್ನು ಧ್ಯಾನಿಸುತ್ತ) ಓಂ ಮೋಂ ಓಂ (ಬಲಗೈಯ ಕಿರುಬೆರಳಲ್ಲಿ ಗೋವಿಂದನನ್ನು ಧ್ಯಾನಿಸುತ್ತ) ಓಂ ಭಂ ಓಂ (ಎಡಗೈಯ ಕಿರುಬೆರಳಲ್ಲಿ ವಿಷ್ಣುವನ್ನು ಧ್ಯಾನಿಸುತ್ತ) ಓಂ ಗಂ ಓಂ (ಎಡಗೈಯ ಉಂಗುರಬೆರಳಲ್ಲಿ ಮಧುಸೂದನ ನನ್ನು ಧ್ಯಾನಿಸುತ್ತ) ಓಂ ವಂ ಓಂ (ಎಡಗೈಯ ಮಧ್ಯಬೆರಳಲ್ಲಿ ತ್ರಿವಿಕ್ರಮನನ್ನು ಧ್ಯಾನಿಸುತ್ತ) ಓಂ ತೇಂ ಓಂ (ಎಡಗೈಯ ತೋರ್ಬೆರಳಲ್ಲಿ ವಾಮನನನ್ನು ಧ್ಯಾನಿ ಸುತ್ತ) ಓಂ ವಾಂ ಓಂ (ಬಲಗೈಯ ಹೆಬ್ಬೆರಳ ಬುಡದ ಸಂಧಿಯಲ್ಲಿ ಶ್ರೀಧರನನ್ನು ಧ್ಯಾನಿಸುತ್ತ) ಓಂ ಸುಂ ಓಂ (ಬಲಗೈಯ ಹೆಬ್ಬೆರಳ ತುದಿಯ ಸಂಧಿಯಲ್ಲಿ ಹೃಷೀಕೇಶನನ್ನು ಧ್ಯಾನಿಸುತ್ತ) ಓಂ ದೇಂ ಓಂ (ಎಡಗೈಯ ಹೆಬ್ಬೆರಳ ಬುಡದ

---

1 ಪ್ರಣವಸಂಪುಟಿತಮೇಕೈಕಮಕ್ಷರಂ ದಕ್ಷಿಣತರ್ಜನೀಮಾರಭ್ಯ ವಾಮತರ್ಜನೀಪರ್ಯಂತ-ಮಂಗುಲಿಷು ಪರಿಶಿಷ್ಟಮಕ್ಷರಚತುಷ್ಟಯಂ ಅಂಗುಷ್ಠಯೋರಾದ್ಯಂತಪರ್ವಸು ಸಂನ್ಯಸೇತ್.... —'ಚಿಟ್ಟೀ' ಆಧಾರೇಣ

ಸಂಧಿಯಲ್ಲಿ ಪದ್ಮನಾಭನನ್ನು ಧ್ಯಾನಿಸುತ್ತ) ಓಂ ವಾಂ ಓಂ (ಎಡಗೈಯ ಹೆಬ್ಬೆರಳ ತುದಿಯ ಸಂಧಿಯಲ್ಲಿ ದಾಮೋದರನನ್ನು ಧ್ಯಾನಿಸುತ್ತ) ಓಂ ಯಂ ಓಂ ಎಂದು ನ್ಯಾಸವನ್ನು ನಡೆಸಬೇಕು.]

## ವಿಷ್ಣು ಮಂತ್ರದ ವರ್ಣಗಳಿಂದ ಷಡಂಗನ್ಯಾಸ:

**ನ್ಯಸೇದ್ಧೃದಯ ಓಂಕಾರಂ ವಿಕಾರಮನು[1] ಮೂರ್ಧನಿ ।**
**ಷಕಾರಂ ತು ಭ್ರುವೋರ್ಮಧ್ಯೇ ಣಕಾರಂ ಶಿಖಯಾ[2] ದಿಶೇತ್ ।**
**ವೇಕಾರಂ ನೇತ್ರಯೋರ್ಯುಂಜ್ಯಾನ್ನಕಾರಂ ಸರ್ವಸಂಧಿಷು ।**
**ಮಕಾರಮಸ್ತ್ರಮುದ್ದಿಶ್ಯ ಮಂತ್ರಮೂರ್ತಿ[3]ರ್ಭವೇದ್ ಬುಧಃ ।**
**ಸವಿಸರ್ಗಂ ಫಡಂತಂ[4] ತತ್[5] ಸರ್ವದಿಕ್ಷು ವಿನಿರ್ದಿಶೇತ್ ॥ ೧೦ ॥**

(ವಿಷ್ಣುಮಂತ್ರದ ಓಂ, ವಿ, ಷ, ಣ, ವೇ, ನ—ಎಂಬ ಆರು ವರ್ಣಗಳನ್ನು ಹೃದಯವೇ ಮುಂತಾದ ಆರು ಅಂಗಗಳಲ್ಲಿ ನ್ಯಾಸಮಾಡಬೇಕು ಎಂದು ಹೇಳಲಾಗು ವುದು—) ಹೃದಯದಲ್ಲಿ ಓಂಕಾರವನ್ನು, ನೆತ್ತಿಯಲ್ಲಿ ವಿಕಾರವನ್ನು, ಹುಬ್ಬುಗಳ ಮಧ್ಯದಲ್ಲಿ ಷಕಾರವನ್ನು, ಶಿಖೆಯಲ್ಲಿ ಣಕಾರವನ್ನು, ಕಣ್ಣುಗಳಲ್ಲಿ ವೇಕಾರವನ್ನು, ಎಲ್ಲಾ ಸಂಧಿಗಳಲ್ಲಿ ಅಂದರೆ ತೋಳುಗಳ ಹಾಗೂ ಕಾಲುಗಳ ಗಂಟುಗಳಲ್ಲಿ ನಕಾರ ವನ್ನು ನ್ಯಾಸಮಾಡಬೇಕು. ಮಕಾರವನ್ನು 'ಮಃ ಅಸ್ತ್ರಾಯ ಫಟ್'—ಎಂಬು ದಾಗಿ ಎಲ್ಲ ದಿಕ್ಕುಗಳಲ್ಲಿ ನಿರ್ದೇಶಿಸಿ ದಿಗ್ಬಂಧನವನ್ನು ನಡೆಸಬೇಕು. ಹೀಗೆ ಅಂಗನ್ಯಾಸಕರನ್ಯಾಸಗಳಿಂದಾಗಿ ಮಂತ್ರದೇವತೆ ತನ್ನಲ್ಲಿ ವಿಶೇಷವಾಗಿ ಸನ್ನಿಹಿತ ನಾಗಿರುವಂತೆ ಮಾಡಿಕೊಳ್ಳಬೇಕು

(ವಿಷ್ಣುಮಂತ್ರದ ವರ್ಣಗಳನ್ನು ಷಡಂಗಗಳಲ್ಲಿ ನಡೆಸಬೇಕಾದ ನ್ಯಾಸದ ವಿವರ—)

---

1 ಅನು ಓಂಕಾರಂ ಸಂಯೋಜ್ಯ ತದನು ವಿಕಾರಂ ಮೂರ್ಧನಿ ನ್ಯಸೇತ್ —ಸತ್ಯ

2 ಶಿಖಯಾ ಶಿಖಾಯಾಂ —ಸತ್ಯ

3 ಮಂತ್ರಮೂರ್ತಿಃ ಮಂತ್ರದೇವತಾಸನ್ನಿಧಾನಯುಕ್ತದೇಹ ಇತಿ —ವಿಜಯ

4 ವಿಸರ್ಗೇಣ ಸಹಿತಂ ಸವಿಸರ್ಗಂ ಫಟ್ಕಾರಃ ಅಂತೇ ಯಸ್ಯ ತತ್ ಫಡಂತಂ ತತ್ ಮಕಾರಾಸ್ತ್ರಂ ಸರ್ವದಿಕ್ಷು ವಿನಿರ್ದಿಶೇತ್ 'ಮಃ ಅಸ್ತ್ರಾಯ ಫಟ್' ಇತ್ಯೇವಂ ದಿಗ್ಬಂಧೇ ವಿನಿರ್ದಿಶೇದಿತ್ಯರ್ಥಃ —ಚಿಟ್ಟೀ

5 'ತು' ಇತಿ ಪಾಠಾಂತರಮ್ ।

(ಹೃದಯದಲ್ಲಿ, ವಿಶ್ವನನ್ನು ಧ್ಯಾನಿಸುತ್ತ) ಓಂ ಓಂ ಓಂ (ನೆತ್ತಿಯಲ್ಲಿ ತೈಜಸನನ್ನು ಧ್ಯಾನಿಸುತ್ತ) ಓಂ ವಿಂ ಓಂ (ಹುಬ್ಬುಗಳ ಮಧ್ಯದಲ್ಲಿ ಪ್ರಾಜ್ಞನನ್ನು ಧ್ಯಾನಿಸುತ್ತ) ಓಂ ಷಂ ಓಂ (ಶಿಖೆಯಲ್ಲಿ ತುರ್ಯನನ್ನು ಧ್ಯಾನಿಸುತ್ತ) ಓಂ ಣಂ ಓಂ (ಕಣ್ಣುಗಳಲ್ಲಿ ಆತ್ಮನನ್ನು ಧ್ಯಾನಿಸುತ್ತ) ಓಂ ವೇಂ ಓಂ (ಎಲ್ಲ ಸಂಧಿಗಳಲ್ಲಿ ಅಂತರಾತ್ಮನನ್ನು ಧ್ಯಾನಿಸುತ್ತ) ಓಂ ನಂ ಓಂ—ಎಂದು ನ್ಯಾಸವನ್ನು ನಡೆಸಬೇಕು.)

"ಮಃ ಅಸ್ತ್ರಾಯ ಫಟ್" ಎಂಬ ದಿಕ್ಕುಗಳಲ್ಲೂ ದಿಗ್ಬಂಧನವನ್ನು ನಡೆಸಬೇಕು.)

**ಓಂ [1] ವಿಷ್ಣವೇ ನಮಃ**
**ಇತ್ಯಾತ್ಮಾನಂ ಪರಂ ಧ್ಯಾಯೇದ್ [2]**
**ಧ್ಯೇಯಂ ಷಟ್‌ಶಕ್ತಿಭಿರ್ಯುತಮ್ [3]**
**ವಿದ್ಯಾತೇಜಸ್ತಪೋಮೂರ್ತಿ [4]–**
**ರಿಮಂ ಮಂತ್ರಮುದಾಹರೇತ್ ॥ ೧೧ ॥**

ಹಿಂದೆ ಷಡಂಗನ್ಯಾಸಕ್ಕೆ ಬಳಸಲಾದ ಮಂತ್ರದ ನೈಜ ಸ್ವರೂಪ—ಓಂ ವಿಷ್ಣವೇ ನಮಃ"—ಎಂಬುದಾಗಿ ಅದನ್ನು ಪಠಿಸುತ್ತ ಹೀಗೆ ಧ್ಯಾನಿಸಬೇಕು—

ಮಂತ್ರದ ಅರ್ಥಜ್ಞಾನರೂಪವಾದ ವಿದ್ಯಾ ನಿರಂತರಚಿಂತನರೂಪವಾದ ತೇಜಸು, ಮನನರೂಪವಾದ ತಪಸ್ಸು ಈ ಮೂರು ತನ್ನಲ್ಲಿ ಅಭಿವ್ಯಕ್ತಗಳಾಗಿ ಇರುವಂತೆ ಮಾಡಿದವನಾಗಿ ಸಮಗ್ರ ಐಶ್ವರ್ಯಾದಿ ಆರು ಗುಣಗಳಿಂದ ಅಥವಾ ಉತ್ಸಾಹ ಶಕ್ತಿಯೇ ಮುಂತಾದ ಆರು ಶಕ್ತಿಗಳಿಂದ ಕೂಡಿದ ಭಗವಂತನನ್ನು ಧ್ಯಾನಿಸುತ್ತ "ಹರಿರ್ವಿದಧ್ಯಾತ್....ಮುಂತಾದ ಮಂತ್ರವನ್ನು ಪಠಿಸಬೇಕು.

---

1 ಮಂತ್ರೋದ್ಧಾರಪೂರ್ವಕಂ ಮಂತ್ರದೇವತಾಧ್ಯಾನಮಾಹ —ಚಿಟ್ಟೀ.

* ವ್ಯತ್ಯಸ್ಯೋಕ್ತ್ಯಾ ವಿಷಣವೇ ನಮ ಇತ್ಯನ್ಯಥಾಪ್ರತೀತಿನಿರಾಸಾಯ ಪ್ರತೀಕಂ ಪಠತಿ —ವಿಜಯ

2 ಇತ್ಯುಚ್ಚಾರ್ಯ ಧ್ಯೇಯಮಾತ್ಮಾನಂ ಪರಮಾತ್ಮಾನಂ ಧ್ಯಾಯೇತ್ —ಸತ್ಯ

* ಏತನ್ಮಂತ್ರಪ್ರತಿಪಾದ್ಯಂ ಪರಮಾತ್ಮಾನಂ ಧ್ಯಾಯೇತ್ —ಚಿಟ್ಟೀ

3 ಐಶ್ವರ್ಯಾದಿಷಟ್‌ಶಕ್ತಿಭಿಃ । ಉತ್ಸಾಹಪ್ರಭುಮಂತ್ರಜ್ಞಾನಕ್ರಿಯೇಚ್ಛಾಶಕ್ತಿಭಿರ್ವಾ -ವಿಜಯ

4 ಮಂತ್ರಸ್ಯಾರ್ಥಜ್ಞಾನಂ ವಿದ್ಯಾ, ನಿರಂತರಚಿಂತನಮೇವ ತೇಜಃ । ಮನನಂ ತಪಃ, ಏತತ್ತ್ರಯಂ ಯತ್ರ ಸಮ್ಯಗಭಿವ್ಯಕ್ತಂ ಸಃ ವಿದ್ಯಾತೇಜಸ್ತಪೋಮೂರ್ತಿಃ । —ರಾಮ

# ಅಥ ನಾರಾಯಣವರ್ಮ :

**[1] ಹರಿರ್ವಿದಧ್ಯಾನ್ಮಮ ಸರ್ವರಕ್ಷಾಂ [2]**
**ನ್ಯಸ್ತಾಂಘ್ರಿಪದ್ಮಃ [3] ಪತಗೇಂದ್ರಪೃಷ್ಠೇ ।**
**ದರಾರಿಚರ್ಮಾಸಿಗದೇಷುಚಾಪ-**
**ಪಾಶಾನ್ ದಧಾನೋಽಷ್ಟ[4] ಗುಣೋಽಷ್ಟಬಾಹುಃ ॥ ೧೨ ॥**

ಪಕ್ಷಿ ಶ್ರೇಷ್ಠವಾದ ಗರುಡನ ಬೆನ್ನ ಮೇಲೆ ಪಾದಕಮಲವನ್ನು ಚಾಚಿ ಕುಳಿತಿರುವ, ಸೃಷ್ಟಿಸುವುದು–ಪಾಲಿಸುವುದು–ಸಂಹರಿಸುವುದು—ಬೇರೆ ಬೇರೆ ಚಟುವಟಿಕೆಗಳಲ್ಲಿ ತೊಡಗಿಸುವುದು [5]–ತಿಳಿಸಿಕೊಡುವುದು–ತಿಳಿಯದಂತೆ ಮಾಡುವುದು—ಸಂಸಾರದಲ್ಲಿ ಸಿಲುಕಿಸುವುದು ಹಾಗೂ ಸಂಸಾರದಿಂದ ಬಿಡುಗಡೆಗೊಳಿಸುವುದು–ಹೀಗೆ ಎಂಟು ಗುಣಗಳನ್ನು ಹೊಂದಿರುವ, ಎಂಟು ಬಾಹುಗಳುಳ್ಳ, ಶಂಖ, ಚಕ್ರ, ಗುರಾಣಿ, ಖಡ್ಗ, ಗದೆ, ಬಾಣ, ಬಿಲ್ಲು ಮತ್ತು ಪಾಶಗಳೆಂಬ ಎಂಟು ಆಯುಧಗಳನ್ನು ಧರಿಸಿರುವ ಶ್ರೀಹರಿಯು ಎಲ್ಲೆಡೆ, ಯಾವಾಗಲೂ, ಸಕಲ ವಿಧದ ಆಪತ್ತುಗಳಿಂದಲೂ ನನ್ನ ರಕ್ಷಣೆಯನ್ನು ನಡೆಸಲಿ.

**ಜಲೇಷು [6] ಮಾಂ ರಕ್ಷತು ಮತ್ಸ್ಯಮೂರ್ತಿ [7]–**
**ರ್ಯಾದೋಗಣೇಭ್ಯೋ ವರುಣಸ್ಯ ಪಾಶಾತ್ [8] ।**
**ಸ್ಥಲೇ ಚ [9]ಮಾಯಾವಟುವಾಮನೋಽವ್ಯಾತ್**
**ತ್ರಿವಿಕ್ರಮಃ ಖೇಽವತು ವಿಶ್ವರೂಪಃ [10] ॥ ೧೩ ॥**

---

1 ಕ್ವಚನ ಪಾಠೇ ಆದೌ ಓಂಕಾರಃ ಪಠ್ಯತೇ ಚೇದಪಿ ಮೂಲಕೋಶೇ ನ ಶ್ರೂಯತೇ ।

2 ಸರ್ವರಕ್ಷಾಂ ಸರ್ವೇಷು ದೇಶೇಷು ಸರ್ವೇಷು ಕಾಲೇಷು ಸರ್ವಾಪದ್ಭ್ಯಶ್ಚ ರಕ್ಷಾಂ –ಚಿಟ್ಟೀ

3 ನ್ಯಸ್ತಾಂಘ್ರೀ ಚ ಪದ್ಮಾ ಪುರತೋ ರಮಾ ಚ ಯೇನ ಸಃ —ಸತ್ಯ

4 ಅಣಿಮಾದ್ಯಷ್ಟಗುಣಃ, ವ್ಯಾಪ್ತಗುಣೋ ವಾ 'ಅಶೂಙ್ ವ್ಯಾಪ್ತೌ' ಇತಿ ಧಾತುಃ । ಶುಭಲಕ್ಷಣಂ ಗುಣಮೇವ ಭುಂಕ್ತೇ ನ ತ್ವಶುಭಲಕ್ಷಣಂ ದುಃಖಮಿತಿ ವ್ಯಾಪ್ತಗುಣಃ । 'ಅಶ ಭೋಜನೇ' ಇತಿ ಧಾತುಃ –ವಿಜಯ

5 ನಿಯಮೋ ವ್ಯಾಪಾರೇಷು ಪ್ರೇರಣಮ್ –ತ. ಸಂ. ಟೀಕಾ

6 ಜಲೇಷು ಜಲಶ್ಚೈವಲಾದೌ । ಜಲೇ ತ್ವಿತ್ಯಪಿ ಪಾಠಃ ಶೋಭನಃ –ಸತ್ಯ

7 ಸ್ವಯಂ ಮಾದ್ಯತೀತರಾನ್ ಮಾದಯತೀತಿ ವಾ ಮತ್ಸ್ಯಃ । 'ಮದ ಹರ್ಷೇ' –ಸತ್ಯ

8 ಯಾದಾಂಸಿ ಜಲಜಂತವ ಇತ್ಯತೋ ವರುಣಪಾಶಸ್ಯ ಯಾದೋಗಣಾಂತರ್ಭೂತತ್ವೇಽಪಿ ತದ್ಗ್ರಹಣಸ್ಯ ಮರಣಾವಿನಾಭೂತತ್ವೇನ ತತ್ಪರಿಹಾರಾರ್ಥಂ ಪೃಥಗ್ ಗ್ರಹಣಮ್ । —ವಿಜಯ

9 ಮಾಯಯಾ ಸ್ವೇಚ್ಛಯಾ ವಟುರ್ವಾಮನಃ –ಸತ್ಯ

10 ....ಸ ಏವ ವಿಶ್ವರೂಪೋ ವ್ಯಾಪ್ತಕಾಯಸ್ತ್ರಿವಿಕ್ರಮನಾಮಾ ಖೇ ಆಕಾಶೇಽವತು –ಸತ್ಯ

* ಖೇ ಸುಖಾತ್ಮಕೇ ಊರ್ಧ್ವಲೋಕಸಮುದಾಯೇ –ರಾಮ

ಮೀನಿನ ರೂಪವುಳ್ಳ ಭಗವಂತನು ನೀರಿನಲ್ಲಿ ಜಲಚರಗಳಿಂದ ಹಾಗೂ "ವರುಣನ ಪಾಶ"ದಿಂದ ಆಪತ್ತು ಬರದಂತೆ ನನ್ನನ್ನು ರಕ್ಷಿಸಲಿ. ನೆಲದ ಮೇಲೆ ಸ್ವೇಚ್ಛೆಯಿಂದ ಬ್ರಹ್ಮಚಾರಿ ವಾಮನನಾದ ಭಗವಂತನು ಕಾಪಾಡಲಿ. ವಿಶ್ವರೂಪಿಯಾಗಿ ಕಾಣಿಸಿಕೊಂಡ ತ್ರಿವಿಕ್ರಮನು ಆಕಾಶದಲ್ಲಿ ಆಪತ್ತು ಬಾರದಂತೆ ನನ್ನನ್ನು ರಕ್ಷಿಸಲಿ.

**ದುರ್ಗೇಷ್ವ[1]ಟವ್ಯಾಜಿಮು (ಮು)ಖಾದಿಷು[2] ಪ್ರಭುಃ**
**ಪಾಯಾನ್ನೃಸಿಂಹೋಽಸುರಯೂಥಪಾರಿಃ ।**
**ವಿಮುಂಚತೋ ಯಸ್ಯ ಮಹಾಟ್ಟಹಾಸಂ**
**ದಿಶೋ ವಿನೇದುರ್ನ್ಯಪತಂಶ್ಚ ಗರ್ಭಾಃ[3] ॥ ೧೪ ॥**

ಯಾರು ಶ್ರೇಷ್ಠವಾದ ಅಟ್ಟಹಾಸವನ್ನು ಗೈಯಲು, ಅದರಿಂದಾಗಿ ದಿಕ್ಕುಗಳೆಲ್ಲ ಪ್ರತಿಧ್ವನಿಸುವವೋ, ಶತ್ರುಗಳ ಸ್ತ್ರೀಯರ ಗರ್ಭಗಳು ಪತಿತವಾಗುವವೋ, ಅಸುರಶ್ರೇಷ್ಠ ಹಿರಣ್ಯಕಶಿಪುವಿಗೆ ಶತ್ರು ಎನಿಸಿರುವ ಅಂತಹ ಸರ್ವಸಮರ್ಥನಾದ ನರಸಿಂಹನು ಸಂಕಟಸ್ಥಾನಗಳಾದ ಅರಣ್ಯ, ಯುದ್ಧದ ಉಪಕ್ರಮ ಮುಂತಾದೆಡೆ ರಕ್ಷಿಸಲಿ.

**ರಕ್ಷತ್ವಸೌ ಮಾಽಧ್ವನಿ[5] ಯಜ್ಞಕಲ್ಪಃ[4]**
**ಸ್ವದಂಷ್ಟ್ರಯೋನ್ನೀತಧರೋ ವರಾಹಃ ।**

---

1 ....ಯೇಷಾಂ ತೇಷು ದುರ್ಗೇಷು ಸಂಕಟಸ್ಥಾನೇಷು —ಚಿಟ್ಟೀ

* ದುರ್ಗೇಷು ಪರ್ವತಾದಿಷು –ಸತ್ಯ

2 ಅಟವೀ ಆಜಿಮುಖ್ಯಂ (ಖಂ?) ಸಂಗ್ರಾಮೋಪಕ್ರಮಶ್ಚಾದಿರ್ಯೇಷಾಂ ತೇಷು.... -ಚಿಟ್ಟೀ

* ಅಟವ್ಯಶ್ಚಾರಣ್ಯಾನಿ ಚಾಜಿಮುಖಾನಿ ಯುದ್ಧಮುಖಾನಿ ಚಾದಯೋ ಯೇಷಾಂ ತೇಷು । ಆಜಿಶ್ಚ ಮುಖಂ ಚಾದಿನಶ್ಚೇತಿ ವಾ । 'ಮುಖಿಃಸರಣೇ' ಇತಿ ವಿಶ್ವಾದ್ ಗಮನವಿಶೇಷ ಇತಿ ಯಾವತ್ । 'ಆದಿನೋ ರಾಕ್ಷಸಾಃ ಪ್ರೋಕ್ತಾಃ' ಇತಿ ದಶಮತಾತ್ಪರ್ಯೋಕ್ತೇ ರಾಕ್ಷಸಾಃ। ದುರ್ಗೇಷು ಪ್ರಭೂ ರಾಜರಾಜೇಶ್ವರೋ ವಾ ಪೃಥ್ವ್ಯಾದ್ಯಾವಿಷ್ಟರೂಪವಿಶೇಷೋ ವೇತಿ ಪೃಥಗ್ರೂಪಪರಮಿದಮಿತಿ ಮಂತವ್ಯಮ್ –ಸತ್ಯ

* ವಿಜಯಧ್ವಜೀಯೇ–'ಅಟವೀ ಚ ಅಜಿಶ್ಚ ಮುಖಶ್ಚಾದಿರ್ಯೇಷಾಂ ತಾನಿ ತಥಾ ತೇಷು' ಇತಿ 'ಅಟವ್ಯಾಜಿಮುಖಾದಿಷು' ಇತಿ ಪಾಠಮವಲಂಬ್ಯ ವ್ಯಾಖ್ಯಾತಮ್ ।

3 ಗರ್ಭಾಃ, ಅಸುರಸ್ತ್ರೀಣಾಮಿತಿ ಶೇಷಃ –ವಿಜಯ

4 ಯಜ್ಞಾನ್ ಸ್ವಾಂಗೇಭ್ಯಃ ಕಲ್ಪಯತೀತಿ –ಸತ್ಯ

5 ಅಧ್ವನಿ ವಿರುದ್ಧಮಾರ್ಗೇ ತದಗಮಕತ್ವೈವಾವನಮಿತಿ ಜ್ಞೇಯಮ್ –ಸತ್ಯ

**ರಾಮೋ[1]ಽದ್ರಿಕೂಟೇಷ್ವಥ[2] ವಿಪ್ರವಾಸೇ[3]**
**ಸಲಕ್ಷ್ಮಣೋಽವ್ಯಾದ್ ಭರತಾಗ್ರಜೋ ಮಾಮ್ ॥ ೧೫ ॥**

ತನ್ನ ಅಂಗಗಳಿಂದ ಯಜ್ಞಗಳನ್ನು ಅಭಿವ್ಯಕ್ತಗೊಳಿಸಿರುವ ತನ್ನ ದಾಡೆಯಿಂದ ಭೂಮಿಯನ್ನು ಮೇಲಕ್ಕೆ ತಂದು ಸ್ಥಾಪಿಸಿರುವ, ವರಾಹನು ದಾರಿಯಲ್ಲಿ ರಕ್ಷಣೆ ನೀಡಲಿ. ಶಾಸ್ತ್ರವಿರುದ್ಧ ಮಾರ್ಗದಲ್ಲಿ ಸಂಚರಿಸದಂತೆ ಮಾಡುವುದರ ಮೂಲಕ ರಕ್ಷಿಸಲಿ. ಪರಶುರಾಮನು ಪರ್ವತದ ಶಿಖರಗಳಲ್ಲಿ ರಕ್ಷಣೆ ನೀಡಲಿ. ಲಕ್ಷ್ಮಣನಿಂದ ಕೂಡಿದ, ಭರತನ ಅಣ್ಣನಾದ ಶ್ರೀರಾಮಚಂದ್ರನು ದೇಶಾಂತರದಲ್ಲಿ ನೆಲೆಸುವ ಸಂದರ್ಭದಲ್ಲಿ ನನ್ನನ್ನು ಕಾಪಾಡಲಿ.

**ಮಾಮುಗ್ರಧನ್ವಾ[4] ಅಖಿಲಪ್ರಮಾದಾ-**
**ನ್ನಾರಾಯಣಃ ಪಾತು ನರಶ್ಚ[5] ಹಾಸಾತ್[6] ।**
**ದತ್ತಸ್ತ್ವ[7]ಯೋಗಾದಥ ಯೋಗನಾಥಃ[8]**
**ಪಾಯಾದ್ ಗುಣೇಶಃ[9] ಕಪಿಲಃ ಕರ್ಮಬಂಧಾತ್ ॥ ೧೬ ॥**

ಶತ್ರುಗಳಿಗೆ ಭಯಂಕರವಾದ ಧನುಸ್ಸನ್ನು ಧರಿಸಿರುವ ನಾರಾಯಣನು ಭಗವಂತನ ವಿಸ್ಮರಣೆಯೇ ಮುಂತಾದ ಎಲ್ಲ ಬಗೆಯ ತಿಳಿಗೇಡಿತನದಿಂದ ನನ್ನನ್ನು

---

1 ರಾಮಃ ಪರಶುರಾಮೋಽದ್ರಿಕೂಟೇಷು ಮಾಹೇಂದ್ರಸದ್ಮತ್ವಾತ್ತಸ್ಯ —ಸತ್ಯ
2 ಅಥೇತಿ ಅವತಾರಭೇದಃ —ರಾಮ
3 ವಿಪ್ರವಾಸೇ-ವಿವಿಧ ಪ್ರವಾಸೇ —ವಿಜಯ
* ವಿಪ್ರವಾಸೇ ಬ್ರಾಹ್ಮಣಾನಾಂ ವಾಸೇ ಯಥಾ ತದಪರಾಧೋ ನ ಘಟೇತ್ತಥೇತಿ —ಸತ್ಯ
* ವಿಪ್ರವಾಸೇ-ಸ್ಥಾನಭ್ರಂಶೇ —ರಾಮ
4 ಛಂದಃಸಾಮ್ಯದ್ಯೋತನಾಯ ಉಗ್ರಧನ್ವಾ ಅಖಿಲಪ್ರಮಾದಾದಿತಿ ಸಂಧ್ಯಭಾವಃ —ಚಿಟ್ಟೀ
5 ನರಾಂತಃಸ್ಥೋ ಭಗವಾನ್ —ಚಿಟ್ಟೀ
* ನರನಾಮಾ ವಿಷ್ಣುಃ —ವಿಜಯ
6 ಹಾಸಾತ್ ಅಹಂಕಾರಾತ್, ಪರಿಹಾಸಾದಿತಿ ವಾ —ರಾಮ
* ಉನ್ಮಾದಕೃತಹಾಸಾತ್ —ವಿಜಯ
7 ಅಯೋಗಾತ್ ನಾರಾಯಣಸ್ಮರಣಾದ್ಯುಪಾಯವೈಕಲ್ಯಾತ್ —ವಿಜಯ
* ಅಯೋಗಾತ್ ಯೋಗಭ್ರಂಶಾತ್ —ಚಿಟ್ಟೀ
8 ಅಷ್ಟಾಂಗಯೋಗಪ್ರವರ್ತಕಃ —ಚಿಟ್ಟೀ
9 ಗುಣಮಯಬಂಧನನಿವರ್ತನ ಸಮರ್ಥಃ —ಚಿಟ್ಟೀ

ರಕ್ಷಿಸಲಿ. ನರ ಎನಿಸಿರುವ ಭಗವಂತನು ಅಹಂಕಾರದಿಂದ ಅಥವಾ ಅಪಹಾಸ್ಯದಿಂದ ನನ್ನನ್ನು ರಕ್ಷಿಸಲಿ. ಯೋಗಪ್ರವರ್ತಕನಾಗಿದ್ದು, 'ಯೋಗನಾಥ' -ಎಂದೆನಿಸಿರುವ 'ದತ್ತ'ನು ಭಗವದ್ಭಕ್ತಿ ಮುಂತಾದ ಯೋಗಗಳನ್ನು ಅಳವಡಿಸಿಕೊಳ್ಳದಿರುವ ಅಪರಾಧದಿಂದ ರಕ್ಷಿಸಲಿ. ಸದ್ಗುಣಗಳಿಗೆ ಹಾಗೂ ಸತ್ವಾದಿ ಪ್ರಾಕೃತಗುಣಗಳಿಗೆ ನಿಯಾಮಕನಾಗಿರುವ ಕಪಿಲನು ಕರ್ಮಬಂಧನದಿಂದ ಕಾಪಾಡಲಿ.

**ಸನತ್ಕುಮಾರೋಽವತು ಕಾಮದೇವಾ[1]-**
**ದ್ಧಯಶೀರ್ಷಃ ಪಥಿ[2] ದೇವಹೇಳನಾತ್ ।**
**ದೇವರ್ಷಿವರ್ಯಃ[3] ಪುರುಷಾಂತರಾರ್ಚನಾತ್[4]**
**ಕೂರ್ಮೋ ಹರಿರ್ಮಾಂ ನಿರಯಾದಶೇಷಾತ್[5] ॥ ೧೭ ॥**

ಸನತ್ಕುಮಾರ ಎನಿಸಿರುವ ಭಗವಂತನು ಅಯೋಗ್ಯಕಾಮನೆಯಿಂದ ರಕ್ಷಿಸಲಿ. ಹಯಗ್ರೀವನು ದಾರಿಯಲ್ಲಿ ಸಂಚರಿಸುವಾಗ ಎಸಗಬಹುದಾದ ದೇವತಿರಸ್ಕಾರದಿಂದ ಪಾರು ಮಾಡಲಿ. ಬ್ರಹ್ಮಾದಿ ದೇವತೆಗಳಲ್ಲೂ ಋಷಿಗಳಲ್ಲೂ ಶ್ರೇಷ್ಠನಾದ ಮಹಿದಾಸನು ಭಗವಂತನಿಗಿಂತ ಇತರ ದೇವತೆಗಳನ್ನು ಅವನ ಪರಿವಾರದವರೆಂಬ ದೃಷ್ಟಿಯನ್ನಿಟ್ಟುಕೊಳ್ಳದೆ ಅರ್ಚಿಸುವುದರಿಂದ, ಕರ್ಮಗಳನ್ನು ಭಗವಂತನಿಗೆ ಅರ್ಪಿಸದೆ ಇರುವುದರಿಂದ ಹಾಗೂ ಅವನನ್ನು ಸ್ಮರಿಸಿಕೊಳ್ಳದೆ ಇರುವುದರಿಂದ ಕಾಪಾಡಲಿ. ಕೂರ್ಮನು ನನ್ನನ್ನು ಸಕಲ ನರಕಗಳಿಂದ, ಅವುಗಳಿಗೆ ನಿಮಿತ್ತಗಳಾದ ಸಕಲ ಪಾಪಗಳಿಂದ ರಕ್ಷಿಸಲಿ.

---

1 ದೇವಯತಿ ಮಾದಯತೀತಿ ದೇವಃ । ವಿಶೇಷೇಣಸ್ಯ ಪರನಿಪಾತಃ । ಕಾಮಶ್ಚಾಸೌ ದೇವಶ್ಚ ಕಾಮದೇವಸ್ತಸ್ಮಾನ್ಮದಕಾರಿಕಾಮಾತ್........ -ಸತ್ಯ

* ಕಾಮಾದಯೋಗ್ಯಾನ್ಮದ್ಯಾದಿವಿಷಯಾತ್ ದೇವಯತಿ ಗಮಯತಿ ವಿಷಯಾನಾತ್ಮನೀತಿ ಕಾಮದೇವಸ್ತಸ್ಮಾತ್ —ವಿಜಯ

2 ಪಥಿ ದೇವಹೇಲನಾತ್ ಮಾರ್ಗಾಂತರ್ವರ್ತಿದೇವಾದಿವಂದನಮವಿಧಾಯ ಧಾವನಾದಿ-ರೂಪಾಸತ್ಕಾರಾತ್ -ಸತ್ಯ

3 ದೇವಾನಾಂ ಬ್ರಹ್ಮಾದೀನಾಂ ಋಷೀಣಾಂ ಚ ವರ್ಯಃ ಶ್ರೇಷ್ಠಃ । ಅನೇನ ಮಹಿದಾಸ ಉಕ್ತಃ । ಮಹಿತೋ ಮಹಾಂತೋ ಬ್ರಹ್ಮಾದಯೋ ದಾಸಾ ಯಸ್ಯೇತ್ಯನೇನ ಸಮಾನಾರ್ಥಕತ್ವಾತ್ -ಚಿಟ್ಟೀ

4 ಅರ್ಚನಶಬ್ದೇನ ಭಗವದಸಮರ್ಪಣಾಸ್ಮರಣೇ ಚೋಪಲಕ್ಷಣಯಾಽವಗೃಹ್ಯೇತೇ । ಆ ಅರ್ಚನಾದಿತ್ಯಾಪ್ರಶ್ಲೇಷೇ ಆ ಸಮ್ಯಗ್ ಅಪರಿವಾರದೃಷ್ಟ್ಯೇತಿ ಯಾವತ್ ಲಭ್ಯತೇ -ಸತ್ಯ

5 ನಿರಯಾತ್ ನಿಃಶೇಷಂ ವಿಶ್ಲೇಷ್ಯ ನಿರಯದ್ದುರ್ದುರ್ಯಾವಾದಿತಿ । -ಸತ್ಯ

ಧನ್ವಂತರಿರ್ಭಗವಾನ್[1] ಪಾತ್ವಪಥ್ಯಾದ್[2]
ದ್ವಂದ್ವಾದ್[3] ಭಯಾದ್ ಋಷಭೋ ನಿರ್ಜಿತಾತ್ಮಾ ।
ಯಜ್ಞಶ್ಚ ಲೋಕಾದುತ[4] ತತ್ಕೃತಾನ್ನೋ[5]
ಬಲೋ[6] ಗಣಾತ್ ಕ್ರೋಧವಶಾದಹೀಂದ್ರಃ[7] ॥ ೧೮ ॥

ಸಮಗ್ರ ಪ್ರಭುತ್ವವೇ ಮುಂತಾದ ಷಡ್ಗುಣಸಂಪನ್ನನ್ನಾದ ಧನ್ವಂತರಿಯು ಅಂತಃಕರಣದ ಮೇಲೆ ಕೆಟ್ಟ ಪ್ರಭಾವ ಬೀರಬಲ್ಲ ಹಾಗೂ ದೇಹಕ್ಕೆ ರೋಗಜನಕವಾದ ಅಹಿತ ಆಹಾರದಿಂದ ಪಾರುಮಾಡಲಿ. ಇಂದ್ರಿಯಸಮೂಹವನ್ನು ನಿಗ್ರಹಿಸಿಕೊಂಡಿರುವ ಋಷಭರೂಪಿ ಪರಮಾತ್ಮನು ಜಯಾಪಜಯ, ಸುಖದುಃಖ, ಶೀತೋಷ್ಣ ಮುಂತಾದ ದ್ವಂದ್ವಪ್ರಯುಕ್ತ ಭಯದಿಂದ ರಕ್ಷಿಸಲಿ. ಯಜ್ಞನಾಮಕ ಭಗವಂತನು ರಾಕ್ಷಸರೇ ಮುಂತಾದ ದುರ್ಜನರಿಂದ ರಕ್ಷಣೆಯನ್ನು ನೀಡಲಿ; ಒಂದು ವೇಳೆ ದುರ್ಜನರು ಆಕ್ರಮಿಸಿದರೂ ಏನೂ ಹಾನಿ ಆಗದಂತೆ ರಕ್ಷಿಸಲಿ, ಶೇಷರೂಪಿಯಾದ ಬಲರಾಮನಲ್ಲಿ ಆವಿಷ್ಟನಾದ, ಭಗವಂತನು ಸರ್ಪಸಮೂಹದಿಂದ ರಕ್ಷಣೆಯನ್ನು ನೀಡಲಿ.

---

1 ಧನ್ವಂ ಪಾಪಂ ತರತಿ ಸ್ವಯಂ ತರಣಂ ನಾಮಾತ್ರ ತದಸಂಸರ್ಗರೂಪಂ ತಾರಯತೀತರಾನಿತಿ ವಾ ಸ ತಥಾ । ಧನ್ವಮಿತಿ ಪಾಪಜೋ ರೋಗೋ ಗೃಹ್ಯತೇ –ಸತ್ಯ

2 ಶರೀರರೋಗಜನಕಾದಪಥ್ಯದ್ರವ್ಯಾತ್ —ವಿಜಯ

3 ದ್ವಂದ್ವಾತ್ ಶೀತೋಷ್ಣಾದೇರ್ಭಯಾತ್ —ಚಿಟ್ಟೀ

* ದ್ವಂದ್ವಾದಿಸಹನಸ್ಯ ಮನೋನಿಯಮನನಿದಾನಕತ್ವಾದಿತ್ಯಾಶಯಃ । –ಸತ್ಯ

4 ಲೋಕಾದ್ದುರ್ಜನಾದ್ರಕ್ಷ ಆದೇಃ –ಸತ್ಯ

* ಲೋಕಾಜ್ಜನಾಪವಾದಾತ್ –ಚಿಟ್ಟೀ

5 ಉತ ತತ್ಕೃತಾದುಪದ್ರವಾತ್ । ಪ್ರಥಮತಸ್ತದಪ್ರಾಪ್ತಿಪ್ರಾರ್ಥನಂ ಕಥಂಚಿದಾಗಮನೇ ಶತ್ರಾಶಾಸನಮಿತ್ಯುಕ್ತಮಿತಿ ವೇದಿತವ್ಯಮ್ –ಸತ್ಯ

* ತತ್ಕೃತಾತ್ ಲೋಕಕೃತೋಪಘಾತಾತ್ –ಚಿಟ್ಟೀ

* ತತ್ಕೃತಾದ್ ಯಜ್ಞಕರ್ಮಾಪಾದಿತಾದನಿತ್ಯಫಲಾತ್ ಸ್ವರ್ಗಾದೇಃ –ವಿಜಯ

6 ಬಲೋ ಬಲಭದ್ರಾವಿಷ್ಟೋ ಭಗವಾನ್ –ಚಿಟ್ಟೀ

* ಬಲಃ ಬಲರಾಮಃ । ಸ ಕಿಮಾಕಾರ ಇತ್ಯತ ಆಹ-ಅಹೀಂದ್ರ ಇತಿ । ಶೇಷಾಂಶಃ....ತಸ್ಯ ಚ ತದಧಿಪತ್ವಾತ್ । –ಸತ್ಯ

* ಬಲಃ ಬಲಭದ್ರಃ ಸ ಏವಾಹೀಂದ್ರಃ ಶೇಷನಾಮಾ –ವಿಜಯ

* ಅಹೀಂದ್ರಃ ಶೇಷಾವಿಷ್ಟೋ ಭಗವಾನ್ –ಚಿಟ್ಟೀ

7 ಕ್ರೋಧವಶಾದ್ಗಣಾತ್ ಸರ್ಪಗಣಾತ್ –ಚಿಟ್ಟೀ

ದ್ವೈಪಾಯನೋ[1] ಭಗವಾನ್ ಸಂಪ್ರಮೋಹಾತ್[2]
ಬುದ್ಧಶ್ಚ ಪಾಷಂಡಗಣಾತ್[3] ಪ್ರಮಾದಾತ್ ।
ಕಲ್ಕಿಃ ಕಲೇಃ[4] ಕಾಲಮಲಾತ್ ಪ್ರಪಾತು
ಧರ್ಮಾವನಾಯೋರುಕೃತಾವತಾರಃ[5] ॥ ೧೯ ॥

ಭಗವಾನ್ ಶ್ರೀವೇದವ್ಯಾಸರು ಶಾಸ್ತ್ರವಿಷಯಕಾಜ್ಞಾನದಿಂದ ರಕ್ಷಿಸಲಿ. ಬುದ್ಧನು ಬೌದ್ಧಪಾಶುಪತಾದಿಪಾಷಂಡಶಾಸ್ತ್ರಶ್ರವಣಾದಿಯಿಂದ ಉಂಟಾಗಬಹುದಾದ ಪ್ರಮಾದದಿಂದ ಪಾರುಮಾಡಲಿ. ದುಷ್ಟರ ದೆಸೆಯಿಂದ ಧರ್ಮವನ್ನು ಪರಿಪಾಲನೆ ಮಾಡುವುದಕ್ಕಾಗಿ ಬ್ರಹ್ಮಾದಿಗಳ ಪ್ರಾರ್ಥನೆಗನುಗುಣವಾಗಿ ಅವತರಿಸಿರುವ ಕಲ್ಕಿಯು ಕಲಿಕಾಲಪ್ರಯುಕ್ತವಾದ ಪಾಪದಿಂದ ಪಾರುಮಾಡಲಿ.

---

1 ದ್ವೀಪೋಽಯನಂ ಯಸ್ಯ ಸ ಪರಾಶರಸ್ಯಾಪತ್ಯಮ್ –ಸತ್ಯ

2 ಸಂಪ್ರಮೋಹೋ ಮಿಥ್ಯಾಜ್ಞಾನಮ್ ।........ಅಧರ್ಮೇಚ್ಛಾ ವಾ । 'ಅಸಂಪ್ರಮೋಹೋಽಧರ್ಮಕಾಮಿತೇತಿ ವಚನಾತ್' –ಚಿಟ್ಟೀ

* ಅಪ್ರಬೋಧಾತ್ ಶಾಸ್ತ್ರವಿಷಯಾಜ್ಞಾನಾತ್ । ಸಂಪ್ರಮೋಹಾದಿತಿ ಪಾಠಃ ಸ್ಫುಟಾರ್ಥಃ । ತಸ್ಯ ವೇದಾದಿಸಚ್ಛಾಸ್ತ್ರಪ್ರವಕ್ತ್ರಾಚಾರ್ಯತ್ವಾತ್ –ಸತ್ಯ

3 ಪಾಷಂಡಗಣಾತ್ ಪ್ರಮಾದಾತ್। ಪಾಶುಪತಾದಿದುಶ್ಶಾಸ್ತ್ರಸಮೂಹಃ ಪಾಷಂಡಗಣಸ್ತಚ್ಛ್ರವಣಾದಿಪ್ರಾಪ್ತಾತ್ ಪ್ರಮಾದಾತ್ । 'ಬೌದ್ಧಪಾಶುಪತಾದ್ಯಾಸ್ತು ಪಾಷಂಡಾ ಇತಿ ಕೀರ್ತಿತಾಃ' ಇತಿ ವಚನಾತ್ । –ಚಿಟ್ಟೀ

* ಪಾಷಂಡಗಣಾತ್ ಜನಾದೇಃ । ಯದ್ವಾ ಪಾಷಂಡಗಣಾತ್ತದ್ಧೇತುಕಾತ್ ಪ್ರಮಾದಾತ್ತತ್ಸಹವಾಸಸಂಭವಾದಿತಿ ಯಾವತ್ —ಸತ್ಯ

4 ಕಲೇಃ ಕಾಲಮಲಾದಿತಿ ಪದಮೇಕಮ್ । ತತ್ರ ಷಷ್ಠ್ಯಾ ಅಕ್ರೋಶೇಽಲುಕ್ । ಕಲಿಸ್ವಾಮಿಕೋ ಯಃ ಕಾಲಸ್ತತ್ಪ್ರಯೋಜಕಂ ಯನ್ಮಲಂ ಪಾಪಂ ತಸ್ಮಾತ್ ಪ್ರಪಾತು ಸಮಾವತು –ಸತ್ಯ

* ಕಾಲಮಲಾತ್ ಕಾಲಸ್ಯ ಮಲಭೂತಾತ್ ಕಲೇಃ –ಚಿಟ್ಟೀ

5 ಉರುಭಿರ್ವಿರಿಂಚಾದಿಸುರೈಃ ಕೃತಂ ಪ್ರಾರ್ಥನಾದಿಕರ್ಮ ತೇನಾವತಾರೋ ಯಸ್ಯ ಸಃ –ಸತ್ಯ

* ಉರುರ್ಮಹಾನ್ ಕೃತೋಽವತಾರೋ ಯೇನ ಸಃ –ಚಿಟ್ಟೀ

* ಉರು ಪ್ರಪಾತು ಭೂಯೋ ಭೂಯೋ ರಕ್ಷತ್ವಿತ್ಯರ್ಥಃ –ವಿಜಯ

* 'ಧರ್ಮಾವನಾಯೋರುಕೃತಾವತಾರಃ' ಇತಿ ದ್ವೈಪಾಯನಬುದ್ಧಕಲ್ಕೀತ್ಯವತಾರತ್ರಯಂ ಪ್ರತ್ಯಪಿ ವಿಶೇಷಣಮ್ –ರಾಮ

ಮಾಂ ಕೇಶವೋ ಗದಯಾ[1] ಪ್ರಾತರವ್ಯಾದ್
ಗೋವಿಂದ ಆಸಂಗವ ಆತ್ತವೇಣುಃ ।
ನಾರಾಯಣಃ ಪಾತು ಸದಾऽತ್ತ[2]ಶಕ್ತಿ-(ಪ್ರಾಹ್ಣ ಉದಾತ್ತಶಕ್ತಿ-)
ಮರ್ಧ್ಯಂದಿನೇ ವಿಷ್ಣುರರೀಂದ್ರ[3]ಪಾಣಿಃ ॥ ೨೦ ॥

ಕೌಮೋದಕೀ ಗದೆಯಿಂದ ಸಹಿತನಾದ ಕೇಶವನು ಪ್ರಾತಃಕಾಲದಲ್ಲಿ ನನ್ನನ್ನು ರಕ್ಷಿಸಲಿ, ಕೊಳಲನ್ನು ಧರಿಸಿರುವ ಗೋವಿಂದನು "ಆಸಂಗವ" ಎನಿಸುವ ಕಾಲದಲ್ಲಿ ಕಾಪಾಡಲಿ. ಯಾವಾಗಲೂ ಶಕ್ತ್ಯಾಯುಧವನ್ನು ಧರಿಸಿಕೊಂಡಿರುವ ನಾರಾಯಣನು "ಪ್ರಾಹ್ಣ" ಎನಿಸುವ ಕಾಲದಲ್ಲಿ ರಕ್ಷಿಸಲಿ. ಚಕ್ರಶ್ರೇಷ್ಠವನ್ನು ಧರಿಸಿರುವ ವಿಷ್ಣುವು 'ಮಧ್ಯಂದಿನ' ಎನಿಸುವ ಕಾಲದಲ್ಲಿ ರಕ್ಷಿಸಲಿ.

ದೇವೋऽಪರಾಹ್ಣೇ ಮಧುಹೋಗ್ರಧನ್ವಾ
ಸಾಯಂ ತ್ರಿಧಾಮಾ[4]ऽವತು ಮಾಧವೋ ಮಾಮ್ ।
ದೋಷೇ[5] ಹೃಷೀಕೇಶ ಉತಾರ್ಧರಾತ್ರೇ
ನಿಶೀಥ ಏಕೋ[6]ऽವತು ಪದ್ಮನಾಭಃ ॥ ೨೧ ॥

ಶತ್ರುಗಳಿಗೆ ಭಯಂಕರವಾದ ಬಿಲ್ಲನ್ನು ಧರಿಸಿರುವ, ಎಲ್ಲರಿಂದಲೂ ಸ್ತುತ್ಯನಾದ ಮಧುಸೂದನನು 'ಅಪರಾಹ್ಣ' ಕಾಲದಲ್ಲಿ ನನ್ನನ್ನು ರಕ್ಷಿಸಲಿ. ಅನಂತಾಸನ, ವೈಕುಂಠ, ಶ್ವೇತದ್ವೀಪ ಎಂಬ ಮೂರು ಲೋಕಗಳುಳ್ಳ ಮಾಧವನು 'ಸಾಯಂಕಾಲ'ದಲ್ಲಿ ನನ್ನನ್ನು ಕಾಪಾಡಲಿ. 'ದೋಷ' – ಎನಿಸುವ ರಾತ್ರಿ ಭೋಜನಕಾಲದಲ್ಲಿ ಹೃಷೀಕೇಶನು ರಕ್ಷಿಸಲಿ. ಅರ್ಧರಾತ್ರಿಯಲ್ಲಿ ಸ್ವತಂತ್ರನಾದ ಪದ್ಮನಾಭ ಕಾಪಾಡಲಿ.

---

1 ಗದಯಾ ಕೌಮೋದಕ್ಯಾ ಸಹಿತಃ –ಸತ್ಯ

2 ಆತ್ತಶಕ್ತಿರ್ಲಕ್ಷ್ಮೀಸಹಿತ ಇತಿ ವಾ ಶಕ್ತಿಯುಕ್ತ ಇತಿ ವಾ ಶಕ್ತಿರೂಪಾಯುಧಧರ ಇತಿ ವಾऽರ್ಥಃ –ಸತ್ಯ

3 ಅರೀಂದ್ರಾ ಮಹಾವೈರಿಣಃ ಪಾಣೌ ಯಸ್ಯೇತಿ ವಾ ವಶೀಕೃತಶತ್ರುಶ್ರೇಷ್ಠ ಇತ್ಯರ್ಥಃ – ಸತ್ಯ

4 ಅನಂತಾಸನ-ವೈಕುಂಠ-ಶ್ವೇತದ್ವೀಪಾಖ್ಯಾನಿ ತ್ರೀಣಿ ಧಾಮಾನಿ ಯಸ್ಯ ಸಃ । –ಚಿಟ್ಟೀ

5 ದೋಷೇ ರಾತ್ರಿಭೋಜನಕಾಲೇ –ವಿಜಯ

* ರಾತ್ರಿಸಾಮಾನ್ಯವಿವಕ್ಷಾಯಾಂ ದೋಷಾಶಬ್ದೋऽವ್ಯಯವಾಚೀ ಸ್ತ್ರೀಲಿಂಗೋ ವಾ । ರಾತ್ರಿವಿಶೇಷಕಾಲವಿವಕ್ಷಾಯಾಂ ಪುಲ್ಲಿಂಗಃ । --ವಿಜಯ

6 ಅರ್ಧರಾತ್ರಪರ್ಯಂತೇ ಕಾಲೇ ನಿಶೀಥೇ ಉತ ನಿಶೀಥೇ ಚ ಏಕ ಏವ ಪದ್ಮನಾಭೋऽವತು –ಚಿಟ್ಟೀ

ಶ್ರೀವತ್ಸಲಕ್ಷ್ಮ್ಯಪರರಾತ್ರ[1] ಈಶಃ
ಪ್ರತ್ಯೂಷ[2] ಈಶೋಽಸಿಧರೋ ಜನಾರ್ದನಃ ।
ದಾಮೋದರೋಽವ್ಯಾದನುಸಂಧ್ಯಂ ಪ್ರಭಾತೇ[3]
ವಿಷ್ಣುಃ[4] ಶ್ರೀಮಾನ್ ಭಗವಾನ್ ಕಾಲಮೂರ್ತಿಃ[5] || ೨೨ ||

“ಅಪರಾತ್ರ” ಕಾಲದಲ್ಲಿ ಶ್ರೀವತ್ಸಚಿಹ್ನೆವುಳ್ಳ ಸಮರ್ಥನಾದ ಶ್ರೀಧರನು ರಕ್ಷಿಸಲಿ. ಅರುಣೋದಯದ ಪ್ರಾರಂಭದಲ್ಲಿ ಖಡ್ಗಧಾರಿಯಾದ, ಸಮರ್ಥನಾದ, ತ್ರಿವಿಕ್ರಮ ರಕ್ಷಿಸಲಿ. ಸಂಧ್ಯಾಕಾಲಕ್ಕೆ ಸಮೀಪದ ಕಾಲದಲ್ಲಿ ದಾಮೋದರನು ಕಾಪಾಡಲಿ. ಸೂರ್ಯೋದಯ ಕಾಲದಲ್ಲಿ ಸರ್ವಗುಣಾತ್ಮಕ ದೇಹವುಳ್ಳ ವಾಮನ ರಕ್ಷಿಸಲಿ.

ಚಕ್ರಂ ಯುಗಾಂತಾನಲತಿಗ್ಮನೇಮಿ
ಭ್ರಮತ್ ಸಮಂತಾತ್ ಭಗವತ್ಪ್ರಯುಕ್ತಮ್ ।
ದಂದಗ್ಧಿ[6] ದಂದಗ್ಧ್ಯರಿಸೈನ್ಯಮಾಶು
ಕಕ್ಷಂ ಯಥಾ ವಾತಸಖೋ ಹುತಾಶಃ || ೨೩ ||

---

1 ಶ್ರೀವತ್ಸೋ ಲಕ್ಷ್ಮ್ಯಭಿಮನ್ಯಮಾನೋ ಲಕ್ಷ್ಮ ಚಿಹ್ನಂ ಯಸ್ಯ ಸ ತಥಾ ಶ್ರೀಧರ ಇತ್ಯರ್ಥಃ –ಚಿಟ್ಟೀ ।

2 ಪ್ರತ್ಯೂಷೇ ಅರುಣೋದಯಪ್ರಾರಂಭೇ —ವಿಜಯ

3 ಪ್ರಭಾತೇ ಸೂರ್ಯೋದಯಕಾಲೇ —ಚಿಟ್ಟೀ

4 ಅತ್ರ ಕೇಶವಾದಿದ್ವಾದಶಮೂರ್ತೀನಾಂ ಉಲ್ಲೇಖಾತ್ ಜನಾರ್ದನನಾಮ್ನಾ ತ್ರಿವಿಕ್ರಮಃ ವಿಷ್ಣುನಾಮ್ನಾ ವಾಮನಶ್ಚ ಪ್ರಸ್ತೂಯತೇ —ರಾಮ

* ವಿಷ್ಣುರ್ವಾಸುದೇವಃ । ವಿಷ್ಣುರ್ಯೋನಿಂ ಕಲ್ಪಯತ್ವಿತ್ಯತ್ರ ‘ಯೋನಿಕ್ಲೃಪ್ತಿ-ರ್ವಾಸುದೇವಾತ್....’ ಇತಿ ವಿಷ್ಣುಶಬ್ದಸ್ಯ ವಾಸುದೇವಪರತ್ವೇನ ಭಗವತ್ಪಾದೈ-ರ್ವ್ಯಾಖ್ಯಾತತ್ವಾತ್ । ಮಧ್ಯಂದಿನೇ ವಿಷ್ಣುರಿತಿ ವಿಷ್ಣುರೂಪಸ್ಯ ಪ್ರಾಗುಕ್ತತ್ವಾಚ್ಚ । –ಚಿಟ್ಟೀ

5 ಕಾಲಮೂರ್ತಿಃ ಸರ್ವಗುಣಾತ್ಮಕದೇಹೋ ವಿಷ್ಣುಃ । ‘ಸರ್ವಗುಣೋದ್ರೇಕಾತ್ ಕಾಲ ಇತ್ಯಭಿಧೀಯತೇ’ ಇತಿ ವಚನಾತ್ –ಚಿಟ್ಟೀ ।

* ಕಾಲಮೂರ್ತಿಃ ಪ್ರಾತರಿತ್ಯಾರಭ್ಯ ಪ್ರಭಾತ ಇತ್ಯಂತಗ್ರಂಥೋಕ್ತಕಾಲಾಕಾರಃ –ಸತ್ಯ

6 ದಂದಗ್ಧಿ ಅತಿಶಯೇನ ದಹತಿ । ತಸ್ಯಾಯಂ ಸ್ವಭಾವಃ ಏವ ನ ತು ತತ್ಪ್ರಾರ್ಥನೀಯ-ಮಿತ್ಯರ್ಥಃ । ಯದ್ವಾ ದಂದಗ್ಧೀತಿ ಲೋಣ್ಮಧ್ಯಮಪುರುಷಃ । ತತ್ರ ತ್ವಮೇವಂಭೂತಂ ಚಕ್ರಮಿತಿ ಸ್ವರೂಪಮುಕ್ತ್ವಾ ಸಂಬೋಧ್ಯ ಪ್ರಾರ್ಥ್ಯತೇ ಅತಿಶಯೇವ ದಹ ದಹೇತಿ —ಚಿಟ್ಟೀ

* ಸ್ವರೂಪಮುಕ್ತ್ವಾ ಸಂಬೋಧಯತಿ–ದಂದಗ್ಧೀತಿ —ವಿಜಯ

ಯುಗಾಂತದ ಅಗ್ನಿಯಂತೆ ತೀಕ್ಷ್ಣವಾದ ಅಂಚುವುಳ್ಳ, ಭಗವಂತನಿಂದ ಪ್ರಯೋಗಿಸಲ್ಪಟ್ಟ ಸುದರ್ಶನಚಕ್ರವು ಎಲ್ಲೆಡೆ ತಿರುಗುತ್ತ ಇರುವಂತಹದ್ದು. ಅಂತಹ ಸುದರ್ಶನ ಚಕ್ರವೇ! ಗಾಳಿಯ ಮಿತ್ರ ಎನಿಸಿರುವ ಅಗ್ನಿಯು ಒಣಗಿದ ಕಾಡನ್ನು ಹೇಗೋ ಹಾಗೆ ಶತ್ರುಗಳ ಸೈನ್ಯವನ್ನು ಕೂಡಲೇ ಅತಿಶಯವಾಗಿ ಸುಟ್ಟುಹಾಕು.

> ಗದೇಽಶನಿಸ್ಪರ್ಶನವಿಸ್ಫುಲಿಂಗೇ[1]
> ನಿಷ್ಪಿಂಢಿ ನಿಷ್ಪಿಂಢ್ಯಜಿತಪ್ರಿಯಾಽಸಿ ।
> ಕೂಶ್ಮಾಂಡವೈನಾಯಕಯಕ್ಷರಕ್ಷೋ-
> ಭೂತಗ್ರಹಾಂಶ್ಚೂರ್ಣಯ[2] ಚೂರ್ಣಯಾರೀನ್[3] ॥ ೨೪ ॥

ವಜ್ರಾಯುಧಗಳೆರಡರ ಅಥವಾ ಸಿಡಿಲುಗಳ ಸಂಘರ್ಷದಿಂದ ಉಂಟಾಗುವ ಅಗ್ನಿಕಣಗಳಂತಿರುವ ಅಗ್ನಿಕಣಗಳನ್ನೂ, ಮಿಂಚನ್ನೂ ಹೊಂದಿರುವ ಕೌಮೋದಕೀ ಗದೆಯೇ! ನೀನು ಅಜಿತನಿಗೆ ಪ್ರಿಯೆಯಾಗಿರುವವಳು. ನನ್ನ ಶತ್ರುಗಳಾದ ಕೂಶ್ಮಾಂಡ, ವೈನಾಯಕ, ಯಕ್ಷ, ರಾಕ್ಷಸ ಮುಂತಾದವುಗಳನ್ನು ಬೇಗ ಪುಡಿ ಪುಡಿ ಮಾಡು.

> ತ್ವಂ ಯಾತುಧಾನಪ್ರಮಥಪ್ರೇತಮಾತೃ-
> ಪಿಶಾಚವಿಪ್ರಗ್ರಹಘೋರದೃಷ್ಟೀನ್[4] ।
> ದರೇಂದ್ರ ವಿದ್ರಾವಯ ಕೃಷ್ಣಪೂರಿತೋ
> ಭೀಮಸ್ವನೋಽರೀನ್ ಹೃದಯಾನಿ ಕಂಪಯನ್[5] ॥ ೨೫ ॥

---

1 ಅಶನ್ಯೋರ್ನಿರ್ಘಾತಯೋರ್ವಾ ಸ್ಪರ್ಶನಂ ಸ್ಪರ್ಶಃ ಸಂಘರ್ಷ ಇತಿ ಯಾವತ್ । ತಸ್ಮಾಜ್ಜಾತಾ ವಿಸ್ಫುಲಿಂಗಾ ಇವ ವಿಸ್ಫುಲಿಂಗಾ ಅಗ್ನಿ ಕಣಾಯಸ್ಯಾಃ ಸಾ ತತ್ಸಂಬೋಧನಮ್–ಸತ್ಯ

* ಅಶನಿಶಬ್ದೇನ ಮೇಘವಹ್ನಿರ್ಲಕ್ಷ್ಯತೇ —ವಿಜಯ

* ಅಶನಿರ್ವಾಯುನೋದ್ಭೂತಾಗ್ನಿಕಣಃ —ರಾಮ

2 ಅರೀಂಶ್ಚೂರ್ಣಯ —ಚಿಟ್ಟೀ

3 ಸರ್ವತ್ರ ವೀಪ್ಸಾ ಅತಿಶೀಘ್ರತ್ವಾಯ —ಚಿಟ್ಟೀ ।

4 ಯಾತುಧಾನಾ ರಾಕ್ಷಸವಿಶೇಷಾಃ ಪ್ರಮಥಾ ಹರಪಾರ್ಷದಾಃ ಪ್ರೇತಾ ಭೂತವಿಶೇಷಾ ಮಾತರೋ ಗಣದೇವತಾಃ ಪಿಶಾಚಾ ವಿಪ್ರಗ್ರಹಾ ಬ್ರಹ್ಮರಾಕ್ಷಸಾ ಘೋರಾ ದೃಷ್ಟಿರ್ಯೇಷಾಂ ತೇ ತಾನ್ —ಸತ್ಯ

* ಯಾತುಧಾನಾದಿದೃಷ್ಟಿವದ್ ಘೋರದೃಷ್ಟಿರ್ಯೇಷಾಂ ತೇ, ತಾನ್ ಅರೀನ್ ವಿದ್ರಾವಯೇತ್ಯನ್ವಯಃ —ವಿಜಯ

* ವಿಪ್ರಗ್ರಹಾ ಬ್ರಹ್ಮರಾಕ್ಷಸಾ ಯೇಽನ್ಯೇ ಚ ಘೋರದೃಷ್ಟಯಃ —ಚಿಟ್ಟೀ

5 ಪೂರ್ವಂ ಹೃದಯಾನಿ ಕಂಪಯನ್ ಸನ್ ಅರೀನ್ ವಿದ್ರಾವಯ ಪಲಾಯನಸ್ಯ ಹೃದಯಕಂಪನಕಾರಣಕತ್ವಾತ್ —ಸತ್ಯ

ಹೇ ಶಂಖಶ್ರೇಷ್ಠ ಪಾಂಚಜನ್ಯ! ಶ್ರೀಕೃಷ್ಣನಿಂದ ಊದಲ್ಪಟ್ಟು ಭಯಂಕರ ಸದ್ದು ಉಳ್ಳ ನೀನು ರಾಕ್ಷಸವಿಶೇಷರು, ರುದ್ರನ ಪಾರ್ಷದರು, ಭೂತವಿಶೇಷಗಳು, ಗಣದೇವತೆಗಳು, ಬ್ರಹ್ಮರಾಕ್ಷಸಗಳು ಹಾಗೆಯೇ ಘೋರದೃಷ್ಟಿಉಳ್ಳ ಇತರ ಶತ್ರುಗಳು—ಇವುಗಳ ಹೃದಯಗಳಲ್ಲಿ ಮೊದಲು ನಡುಕ ಉಂಟು ಮಾಡಿ, ಬಳಿಕ ಪಲಾಯನ ಮಾಡುವಂತೆ ಮಾಡು.

**ತ್ವಂ ತಿಗ್ಮಧಾರಾಸಿವರಾರಿಸೈನ್ಯ-**
**ಮೀಶಪ್ರಯುಕ್ತೋ ಮಮ ಛಿಂಧಿ ಛಿಂಧಿ [ಛಿಂಧಿ] ।**
**ಚಕ್ಷೂಂಷಿ ಚರ್ಮಞ್ಛತಚಂದ್ರ[1] ಛಾದಯ**
**ದ್ವಿಷಾಮಘಂ ನೋ ಹರ ಪಾಪಚಕ್ಷುಷಾಮ್[2] ॥ ೨೬ ॥**

ತೀಕ್ಷ್ಣವಾದ ಅಲಗು ಉಳ್ಳ ಖಡ್ಗಶ್ರೇಷ್ಠವಾದ ನಂದಕವೇ! ಭಗವಂತನಿಂದ ಪ್ರಯೋಗಿಸಲ್ಪಟ್ಟ ನೀನು ನನ್ನ ಶತ್ರುಗಳ ಸೇನೆಯನ್ನು ಕತ್ತರಿಸು. ನೂರು ಚಂದ್ರಾಕಾರದ ಮಂಡಲಗಳುಳ್ಳ ಗುರಾಣಿ! ಪಾಪದೃಷ್ಟಿವುಳ್ಳ ಶತ್ರುಗಳ ಕಣ್ಣುಗಳನ್ನು ಆಚ್ಛಾದಿಸು, ನಮ್ಮ ಪಾಪವನ್ನು ಪರಿಹರಿಸು.

**ಯನ್ನೋ[3] ಭಯಂ ಗ್ರಹೇಭ್ಯೋ[4]ಽಭೂತ್**
**ಕೇತುಭ್ಯೋ[5] ನೃಭ್ಯ[6] ಏವ ಚ ।**
**ಸರೀಸೃಪೇಭ್ಯೋ ದಂಷ್ಟ್ರಿಭ್ಯೋ[7]**
**ಭೂತೇಭ್ಯೋ[8]ಽಘೇಭ್ಯ[9] ಏವ ಚ ॥ ೨೭ ॥**

---

1 ಫಲಕ ತತಚಂದ್ರ, ಶತಂ ಚಂದ್ರಾ ಯಸ್ಯೋಪರಿ ತದಿತಿ ವಾ ನಾಮ ವೇತಿ ಜ್ಞೇಯಮ್ । —ಸತ್ಯ
* ಶತಂ ಚಂದ್ರಾಕಾರಾನಿ ಮಂಡಲಾನಿ ಯಸ್ಮಿನ್ ಹೇ ಶತಚಂದ್ರ —ಚಿಟ್ಟೀ
* ಶತಚಂದ್ರೇತಿ ಚರ್ಮಣೋ ನಾಮ —ವಿಜಯ
2 ದ್ವಿಷಾಂ ಚಕ್ಷೂಂಷಿ ಛಾದಯಾಚ್ಛಾದಯ । ತತ್ರ ನಿಮಿತ್ತಂ ಪಾಪಚಕ್ಷುಷಾಮಿತಿ । ನೋಽಘಂ ಚ ಹರ —ಸತ್ಯ
3 ಯತ್ ಏಭ್ಯೋ ಭಯಂ ನೋಽಸ್ಮಾಕಂ ಮಾಭೂತ್ । ಏತಾನಿ ಸರ್ವಾಣಿ ಭಗವನ್ನಾಮರೂಪಾಸ್ತ್ರಕೀರ್ತನಾತ್ ಸದ್ಯಃ ಸಂಕ್ಷಯಂ ಪ್ರಯಾಂತ್ವಿತ್ಯನ್ವಯಃ —ಚಿಟ್ಟೀ
4 ಗ್ರಹೇಭ್ಯಃ ಪೂತನಾದಿಭ್ಯಃ ಸೂರ್ಯಾದಿಭ್ಯೋ ವಾ —ಸತ್ಯ
5 ಕೇತುಭ್ಯಃ ಉತ್ಪಾತೇಭ್ಯಃ —ಸತ್ಯ
6 ನೃಭ್ಯ ದುರ್ಮಾನವೇಭ್ಯೋಽನೃಭ್ಯೋ ರಾಕ್ಷಸೇಭ್ಯ ಇತಿ ವಾ —ಸತ್ಯ
7 ದಂಷ್ಟ್ರಿಭ್ಯೋ ವನವರಾಹೇಭ್ಯಃ —ಸತ್ಯ
8 ಭೂತೇಭ್ಯಃ ಇತರಪ್ರಾಣಿಭ್ಯಃ —ಚಿಟ್ಟೀ ।
9 ಅಘೇಭ್ಯಃ ಪಾಪೇಭ್ಯಃ —ಸತ್ಯ

ಸರ್ವಾಣ್ಯೇತಾನಿ ಭಗವನ್ನಾಮ-
ರೂಪಾಸ್ತ್ರಕೀರ್ತನಾತ್ ।
ಪ್ರಯಾಂತು ಸಂಕ್ಷಯಂ ಸದ್ಯೋ
ಯೇಽನ್ಯೇ ಶ್ರೇಯಃಪ್ರತೀಪಕಾಃ[1] ॥ ೨೮ ॥

ಯಾವ ಕಾರಣಕ್ಕಾಗಿ ನಮಗೆ ಪೂತನಾದಿಗ್ರಹಗಳಿಂದ ಅಥವಾ ಸೂರ್ಯಾದಿ ಗ್ರಹಗಳಿಂದ, ಉತ್ಪಾತಗಳಿಂದ, ಕೆಟ್ಟ ಮನುಷ್ಯರಿಂದ, ಸರ್ಪಗಳಿಂದ, ಕಾಡು ಹಂದಿಗಳಿಂದ, ಇತರಪಶುಗಳಿಂದ ಹಾಗೂ ವ್ಯಸನಗಳಿಂದ ಭಯವು ಉಂಟಾಗ ಬಾರದೋ ಆದುದರಿಂದ ಈ ಎಲ್ಲವೂ, ಅಲ್ಲದೆ ಇನ್ನೇನೇನು ಶ್ರೇಯಸ್ಸಿಗೆ ವಿಘಾತಕ ಗಳಾದವು ಇವೆಯೋ ಅವೆಲ್ಲ ಭಗವಂತನ ನಾಮ, ರೂಪ ಹಾಗೂ ಅಸ್ತ್ರ ಸಂಕೀರ್ತ ನೆವುಳ್ಳ 'ನಾರಾಯಣವರ್ಮ'ದಿಂದ[2] ಕೂಡಲೇ ನಾಶಹೊಂದುವಂತಾಗಲಿ.

ಗರುಡೋ ಭಗವಾನ್ಸ್ತೋತ್ರ-
ಸ್ತೋಮಶ್ಛಂದೋಮಯಃ[3] ಪ್ರಭುಃ ।
ರಕ್ಷತ್ವಶೇಷಕೃಚ್ಛ್ರೇಭ್ಯೋ[6]
ವಿಷ್ವಕ್ಸೇನಃ[4] ಸ್ವನಾಮಭಿಃ[5] ॥ ೨೯ ॥

ಬೃಹದ್ರಥಂತರವೇ ಮೊದಲಾದ ಸಾಮಭಾಗ ವಿಶೇಷಗಳು, ಸಾಮಾಧಾರ ವಾದ ಋಕ್-ಮುಂತಾದ ವೇದಗಳಿಗೆ ಅಭಿಮಾನಿ ದೇವತೆಯಾದ, ಪೂಜ್ಯನಾದ,

---

1 ಶ್ರೇಯಃಪ್ರತೀಪಕಾಃ ಶ್ರೇಯೋವಿರೋಧಿನಃ ತೇ ಚಾಸುರಾಃ –ವಿಜಯ

2 ಭಗವತಃ ನಾಮ ರೂಪಂ ಅಸ್ತ್ರಂ ಚ ಯಸ್ಮಿನ್ನುಲ್ಲಿಖ್ಯತೇ ತತ್ ನಾರಾಯಣವರ್ಮ ಭಗವನ್ನಾಮರೂಪಾಸ್ತ್ರಕೀರ್ತನವತ್ –ರಾಮ

3 ಸ್ತೋತ್ರಾಣಿ ಬೃಹದ್ರಥಂತರಾದೀನಿ । ಸ್ತೋಮಃ ಸಾಮಾಧಾರಭೂತೋ ಋಕ್ । ಛಂದಾಂಸಿ ವೇದಾಸ್ತನ್ಮಯಸ್ತತ್ಪ್ರತಿಪಾದ್ಯಸ್ತದಭಿಮಾನೀ ಚ —ಚಿಟ್ಟೀ

* ಸ್ತೋತ್ರಾಣಿ ಸಾಮಭಾಗವಿಶೇಷಃ ।

4 ವಿಷ್ವಕ್ ಸರ್ವತ್ರ ಸೇನಃ ಸ್ವಾಮಿಸಹಿತಃ –ಸತ್ಯ

* ವಿಷ್ವಕ್ಸೇನೋ ನಾಮ ಭಗವತ್ಪಾರ್ಷದಃ —ಚಿಟ್ಟೀ

5 ಸ್ವನಾಮಭಿಃ ಸ್ವಸ್ವಾಮಿನಾಮಭಿಃ ಸ್ವಾಖ್ಯೋ ಭಾವ ಇತಿ ಗೀತಾಭಾಷ್ಯ-ಪ್ರಮೇಯದೀಪಿಕಾಯಾಮ್ —ಸತ್ಯ

* ಸ್ವಾಂತರ್ಯಾಮಿಣೋ ಹರೇರ್ನಾಮಭಿರನುಸ್ಮೃತೈರ್ನಿಮಿತ್ತೇನ —ಚಿಟ್ಟೀ

6 ಅಶೇಷಕೃಚ್ಛ್ರೇಭ್ಯಃ ಸಮಸ್ತಪಾಪೇಭ್ಯಃ —ಸತ್ಯ

* ಸರ್ವಾಪದ್ಭ್ಯೋ ರಕ್ಷತು —ಚಿಟ್ಟೀ

ಎಲ್ಲೆಡೆ ತನ್ನ ಸ್ವಾಮಿಯಾದ ಭಗವಂತನೀಂದ ಕೂಡಿಯೇ ಇರುವ ಗರುಡನು ತನ್ನ ಸ್ವಾಮಿಯ ನಾಮಗಳ ಸ್ಮರಣೆಯಿಂದ ಸಕಲ ಪಾಪಗಳ ದೆಸೆಯಿಂದ ರಕ್ಷಿಸಲಿ. ಅಥವಾ ವಿಷ್ವಕ್ಸೇನ ಎಂಬ ಭಗವಂತನ ಸೇವಕನೂ ತನ್ನ ಸ್ವಾಮಿಯ ನಾಮಗಳ ಸ್ಮರಣೆಯಿಂದ ಸಕಲ ಪಾಪಗಳ, ಸಕಲ ಆಪತ್ತುಗಳ ದೆಸೆಯಿಂದ ಕಾಪಾಡಲಿ.

**ಸರ್ವಾಪದ್ಭ್ಯೋ ಹರೇರ್ನಾಮ-**
**ರೂಪಯಾನಾಯುಧಾನಿ[1] ನಃ ।**
**ಬುದ್ಧೀಂದ್ರಿಯಮನಃಪ್ರಾಣಾನ್**
**ಪಾಂತು ಪಾರ್ಷದಭೂಷಣಾಃ[2] ॥ ೩೦ ॥**

ಭಗವಂತನ ನಾರಾಯಣಾದಿನಾಮಗಳು, ಮತ್ಸ್ಯಾದಿರೂಪಗಳು, ಗರುಡ, ವಾಯು ಮುಂತಾದ ವಾಹನಗಳು, ಚಕ್ರಾದಿ ಆಯುಧಗಳು, ಮುಖ್ಯರಾದ ಅನುಚರರು ಅಥವಾ ಅನುಚರರು ಹಾಗೂ ಆಭರಣಗಳು ನಮ್ಮ ಬುದ್ಧಿ, ಇಂದ್ರಿಯಗಳು, ಮನಸ್ಸು ಹಾಗೂ ಪ್ರಾಣ ಇವುಗಳನ್ನು ಸಕಲ ಆಪತ್ತುಗಳಿಂದ ರಕ್ಷಿಸಲಿ.

**ಯಥಾ ಹಿ ಭಗವಾನೇವ**
**ವಸ್ತುತಃ ಸದಸಚ್ಚ[3] ಯತ್ ।**

---

1 ನಾಮಾನಿ ನಾರಾಯಣಾದೀನಿ ರೂಪಾಣಿ ಮತ್ಸ್ಯಾದೀನಿ ಯಾನಂ ಗರುಡಃ ಆಯುಧಾನಿ ಚಕ್ರಾದೀನಿ.... –ಸತ್ಯ

2 ಪಾರ್ಷದಭೂಷಣಾಃ ಪಾರ್ಷದಮುಖ್ಯಾಃ । ಪಾರ್ಷದಾಶ್ಚ ಭೂಷಣಾಶ್ಚೇತಿ ವಾ, ಲಿಂಗವ್ಯತ್ಯಯಃ ಛಾಂದಸಃ —ಚಿಟ್ಟೀ

* ಯಾನಂ ರಥಃ । ಪಾರ್ಷದಾಶ್ಚ ಭೂಷಣಾಶ್ಚ ಪಾರ್ಷದಭೂಷಣಾಃ । ಭೂಷಣಾನಾಮಪಿ ಜ್ಞಾನಾಶ್ರಯತ್ವಜ್ಞಾಪನಾಯ ಪುಲ್ಲಿಂಗಪ್ರಯೋಗಃ । —ವಿಜಯ

* 'ಭೂಷಣಾಯುಧಲಿಂಗಾಖ್ಯಾ ಧತ್ತೇ —ಇತಿ ತದ್ಭೂಷಣಮಪಿ ತತ್ಸ್ವರೂಪಮಿತಿ ಜ್ಞಾಪನಾಯ ಪುಲ್ಲಿಂಗಪ್ರಯೋಗಃ । –ರಾಮ

3 'ಸರ್ವಂ ಖಲ್ವಿದಂ ಬ್ರಹ್ಮ' ಇತಿ ಶ್ರುತೇಃ ಭಗವಾನೇವ ಯತ್ ಸದಸದ್ವಸ್ತು ವಸ್ತುತಸ್ತನ್ನಿಯಾಮಕತಯಾ ತದ್ರೂಪ ಉಚ್ಯತೇ ಇತಿ ಯಥಾ ಸತ್ಯಂ 'ತತ್ಸೃಷ್ಟ್ವಾ ತದೇವಾನುಪ್ರಾವಿಶತ್ ತದನುಪ್ರವಿಶ್ಯ ಸಚ್ಚ ತ್ಯಚ್ಚಾಭವತ್'' —ಇತಿ ಶ್ರುತಿವಿಹಿತತ್ವಾತ್, ಅನೇನ ಅವ್ಯಭಿಚರಿತೇನ ಸತ್ಯೇನ –ವಿಜಯ

* ಯಥಾ ಸದಸಚ್ಚ ಮೂರ್ತಂ ಚಾಮೂರ್ತಂ ಚ ಯತ್ತತ್ಸರ್ವಂ ಜಗತ್ ವಸ್ತುತಃ ಪಾರಮಾರ್ಥ್ಯೇನ ಭಗವಾನೇವ ಭಗವನ್ನಿಯಾಮ್ಯಮೇವ । ತಥೈವ ಜ್ಞಾತೇನ ಸತ್ಯೇನ ಕಾರಣೇನೋಪದ್ರವಾ ನಾಶಂ ಯಾಂತ್ವಿತ್ಯರ್ಥಃ —ಚಿಟ್ಟೀ

**ಸತ್ಯೇನಾನೇನ ನಃ ಸರ್ವೇ**
**ಯಾಂತು ನಾಶಮುಪದ್ರವಾಃ ॥ ೩೧ ॥**

ಪೃಥ್ವಿ, ಜಲ ಹಾಗೂ ತೇಜಸ್ಸ್ವರೂಪವಾದ ಮೂರ್ತಪ್ರಪಂಚ, ವಾಯು ಹಾಗೂ ಆಕಾಶರೂಪವಾದ ಅಮೂರ್ತಪ್ರಪಂಚ ಅಥವಾ ಕಾರ್ಯಪ್ರಪಂಚ ಹಾಗೂ ಕಾರಣಪ್ರಪಂಚ–ಇವು ಪರಮಾರ್ಥವಾಗಿ ಭಗವಂತನಿಂದ ನಿಯಮ್ಯಗಳಾಗಿದ್ದು 'ಸರ್ವಂ ಖಲ್ವಿದಂ ಬ್ರಹ್ಮ'–ಮುಂತಾದ ಕಡೆಗಳಲ್ಲಿ ಸದಸದಾತ್ಮಕ ಭಗವಂತನೇ ಎಂದು ವ್ಯವಹರಿಸುವುದಿದೆ. ಈ ರೀತಿಯಾಗಿ ತಿಳಿಯಲ್ಪಟ್ಟ ಸತ್ಯದಿಂದಾಗಿ ಅಂದರೆ ಸತ್ಯದ ಅರಿವಿನಿಂದಾಗಿ ನಮ್ಮ ಉಪದ್ರವಗಳೆಲ್ಲ ನಾಶಹೊಂದಲಿ.

**ಯಥೈಕಾತ್ಮ್ಯಾನುಭಾವೇನ[1]**
**ವಿಕಲ್ಪರಹಿತಃ[2] ಸ್ವಯಮ್ ।**
**ಭೂಷಣಾಯುಧಲಿಂಗಾಖ್ಯಾ**
**ಧತ್ತೇ ಶಕ್ತೀಃ[3] ಸ್ವಮಾಯಯಾ ॥ ೩೨ ॥**
**ತೇನೈವ ಸತ್ಯಮಾನೇನ[4]**
**ಸರ್ವಜ್ಞೋ ಭಗವಾನ್ ಹರಿಃ ।**

---

* ಸದಸನ್ನಿಯಾಮಕತಯಾ ಮೂರ್ತಾಮೂರ್ತಜಗನ್ನಿಯಾಮಕತಯಾ .......ಕಾರ್ಯಕಾರಣಾತ್ಮಪ್ರಪಂಚೋ ವಾ ಸದಸದ್ರೂಪ ಉಚ್ಯತೇಽಚ್ಯುತೋ ನ ತು ತಾದ್ರೂಪ್ಯೇಣ ಅನೇನೈವಂವಿಧೇನ ಸತ್ಯೇನ ವಚನೇನ ತುಷ್ಟಶ್ಚತುರ್ಭುಜೋ ವಿಷ್ಣುಃ, ಸತ್ಯೇನ ಭುಜಮುದ್ಧೃತ್ಯ ಶಪಥನೇತಿ ವಾ....ಯಥಾ ಸ್ವವತ್ ಚತುರ್ಭುಜೋ ಮುಕ್ತಃ ಸನ್ ಸಾರೂಪ್ಯಭಾಗ್ ಭವೇಯಂ ತಥಾ ಮಾಂ ಪಾತ್ವಿತಿ ವಾ –ಸತ್ಯ

• ಸತ್ ಸಜ್ಜನವೃಂದಂ ಅಸತ್ ಅಸಜ್ಜನವೃಂದಂ ಚ ಯತ್ ಯಾತಿ ಗಚ್ಛತೀತಿ । —ರಾಮ

1 ಐಕಾತ್ಮ್ಯಾನುಭಾವೇನ ತತ್ತದ್ವಸ್ತುಸ್ಥಿತರೂಪಾಣಾಮೇಕತ್ವಾನುಸಂಧಾನೇನ —ಸತ್ಯ

• ತತ್ತದ್ವಸ್ತುಸ್ಥಿತರೂಪಾಣಾಮೇಕತ್ವಾಪರೋಕ್ಷಜ್ಞಾನೇನ । —ಚಿಟ್ಟೀ

• ಏಕಶ್ಚಾತ್ಮಾ ಚ ಏಕಾತ್ಮಾ ಮುಖ್ಯಃ ಸ್ವತಂತ್ರಸ್ತಸ್ಯಭಾವ ಐಕಾತ್ಮ್ಯಂ ತದೇವಾನುಭವಃ, ತೇನ ಮುಖ್ಯತಂತ್ರತ್ವಾದಿತಿ ಯಾವತ್ —ಚಿಟ್ಟೀ

2 ವಿಕಲ್ಪರಹಿತಃ ಸ್ವಗತಭೇದವರ್ಜಿತಃ —ಸತ್ಯ

3 ಭೂಷಣಾದಿಸಂಜ್ಞಾಃ ಸ್ವಾಧೀನತ್ವಾಚ್ಛಕ್ತಿಶಬ್ದವಾಚ್ಯಾ ಧತ್ತೇ....ವಿಜಯ

* ತೇಷು ತತ್ತಚ್ಛಕ್ತಿರೂಪೇಣ ತಾಸ್ವಾತ್ಮ ಶಕ್ತಯೋ ಯೇನ ತತ್ತಥಾ ತಚ್ಚ ತತ್ಸ್ವರೂಪಂ ಚ ತೇನ ತತ್ತತ್ಸತ್ತಾದಿದಾತೃತಯಾ ತತ್ರ ಸ್ವಯಮೇವ ಅತೋಽಯಂ ವ್ಯವಸ್ಥಿತಃ । ಭೂಷಣಾಯುಧಲಿಂಗಾಖ್ಯಾ ಶಕ್ತೀರ್ಧತ್ತೇ । —ಸತ್ಯ

4 ತೇನೈವ ಸತ್ಯಮಾನೇನ ತವಾಖ್ಯಪ್ರಮಾಣೇನ ಸತ್ಯಮಾನೇನ ಮದೀಯಶಪಥಜ್ಞಾನೇನ –ಸತ್ಯ

**ಪಾತು ಸರ್ವೈಃ ಸ್ವರೂಪೈರ್ನಃ**
**ಸದಾ ಸರ್ವತ್ರ ಸರ್ವಗಃ[1] ॥ ೩೩ ॥**

ಆಯಾ ವಸ್ತುಗಳಲ್ಲಿ ನಿಯಾಮಕಗಳಾಗಿ ಇರುವ ರೂಪಗಳಿಗೆ ಅಭೇದಾನುಸಂಧಾನದಿಂದ ತಾನು ಸ್ವಗತ ಭೇದಗಳಿಂದ ದೂರನಾಗಿರುವವನಾದರೂ ತನ್ನ ಇಚ್ಛೆಯಿಂದ, ಶಕ್ತಿಯಿಂದ ತನ್ನ ಭೂಷಣ, ಆಯುಧ, ಹಾಗೂ ಚಿಹ್ನೆಗಳಲ್ಲಿ ಆಯಾ ಶಬ್ದವಾಚ್ಯಗಳಾದ ರೂಪಗಳನ್ನು ಧರಿಸಿರುವನು. ಈ ರೂಪದ ಯಥಾರ್ಥ ಪ್ರಮಾಣದಿಂದ, ಅಥವಾ ನನ್ನ ಶಪಥಜ್ಞಾನದಿಂದ ಸಂತುಷ್ಟನಾದ ಬೇರೆ ಬೇರೆ ರೂಪದಿಂದ ಎಲ್ಲೆಡೆ ಇರುವ ಭಗವಂತನು ಯಾವಾಗಲೂ ಎಲ್ಲೆಡೆ ತನ್ನ ಸಕಲ ರೂಪಗಳಿಂದ ಕಾಪಾಡಲಿ.

**ವಿದಿಕ್ಷು ದಿಕ್ಷೂರ್ಧ್ವಮಧಃ ಸಮಂತಾ-**
**ದಂತರ್ಬಹಿರ್ಭಗವಾನ್ ನಾರಸಿಂಹಃ[3] ।**
**ಪ್ರಹಾಪಯ[2]ಲ್ಲೋಕಭಯಂ ಸ್ವನೇನ**
**ಸ್ವತೇಜಸಾ ಗ್ರಸ್ತಸಮಸ್ತತೇಜಾಃ ॥ ೩೪ ॥**

ತನ್ನ ತೇಜಸ್ಸಿನಿಂದ ಸೂರ್ಯಾದಿಗಳ ತೇಜಸ್ಸು ಮಸುಕು ಆಗುವಂತೆ ಮಾಡಿರುವ ತನ್ನ ಗರ್ಜನೆಯಿಂದ ಸಜ್ಜನರ ಭಯವನ್ನು ಪರಿಹರಿಸುವ ಭಗವಾನ್ ನರಸಿಂಹನು ದಿಕ್ಕುಗಳಲ್ಲಿ, ವಿದಿಕ್ಕುಗಳಲ್ಲಿ, ಮೇಲೆ, ಕೆಳಗೆ, ಒಳಗೆ, ಹೊರಗೆ–ಹೀಗೆ ಎಲ್ಲೆಡೆ ನನ್ನನ್ನು ಕಾಪಾಡಲಿ.

x x x x

---

* ತೇನ ತತ್ಪ್ರಕಾರಕವಿಷಯಕೇಣ ಸತ್ಯಮಾನೇನ ಯಥಾರ್ಥಜ್ಞಾನನಿಮಿತ್ತೇನ ।

* ಸತ್ಯಮಾನೇನ ಸತ್ಯಾಖ್ಯ ಪ್ರಮಾಣೇನ ಯಥಾರ್ಥೇನ –ವಿಜಯ

* ಸಜ್ಜನವೃಂದರಕ್ಷಕೇಣ ಭಗವದ್ರೂಪೇಣ —ರಾಮ

1 ಸರ್ವಗಃ ಸರ್ವರೂಪೈರಾವಿಷ್ಟವಾನಾವಿಷ್ಟರೂಪೈರ್ನಃ ಸದಾ ಸರ್ವದಾ ಸರ್ವತ್ರ ದೇಶಸಾಮಾನ್ಯೇ ಪಾತು । —ಸತ್ಯ

2 ಪ್ರಹಾಪಯನ್ನಿತಿ ಸ್ವಾರ್ಥೇ ಣಿಚ್, ಪರಿಹರನ್ನಿತ್ಯರ್ಥಃ –ವಿಜಯ

3 ಪಾತ್ವಿತ್ಯನುಷಂಗಃ –ಚಿಟ್ಟೇ ।

## ಫಲಶ್ರುತಿ :

ಮಘವನ್ನಿದಮಾಖ್ಯಾತಂ ವರ್ಮ ನಾರಾಯಣಾತ್ಮಕಮ್ ।
ವಿಜೇಷ್ಯಸ್ಯಂಜಸಾ ಯೇನ ದಂಶಿತೋಽಸುರಯೂಥಪಾನ್ ॥ ೩೫ ॥

ಹೇ 'ದೇವೇಂದ್ರ!' ನಾರಾಯಣನ ಅತಿಶಯಸನ್ನಿಧಿಯನ್ನು ಹೊಂದಿಸಬಲ್ಲ, ಅಥವಾ ನಾರಾಯಣನೇ ಸ್ವಾಮಿ ಆಗಿ ಉಳ್ಳ[1] ಅಥವಾ ನಾರಾಯಣನ ರೂಪಗಳಿಂದ ವ್ಯಾಪ್ತವಾದ[2] ಕವಚವನ್ನು ಹೇಳಲಾಗಿದೆ. ಇದನ್ನು ಚೆನ್ನಾಗಿ ಧರಿಸಿದಿ ಎಂದರೆ ಅಸುರಶ್ರೇಷ್ಠರನ್ನು ಚೆನ್ನಾಗಿ ಜಯಿಸುವಿ.

ಏತದ್ ಧಾರಯಮಾಣಸ್ತು ಯಂ ಯಂ ಪಶ್ಯತಿ ಚಕ್ಷುಷಾ ।
ಪದಾ ವಾ ಸಂಸ್ಪೃಶೇತ್ ಸದ್ಯಃ ಸಾಧ್ವಸಾತ್ ಸ ವಿಮುಚ್ಯತೇ ॥೩೬॥

ಈ ನಾರಾಯಣವರ್ಮನನ್ನು ಧರಿಸಿಕೊಂಡವನು ತನ್ನ ಕಣ್ಣಿನಿಂದ ಯಾರನ್ನು ಕಾಣುವನೋ, ಪಾದದಿಂದ ಯಾರನ್ನು ಸ್ಪರ್ಶಿಸುವನೋ ಹಾಗೆ ನೋಡಲ್ಪಟ್ಟವನೂ, ಸ್ಪರ್ಶಿಸಲ್ಪಟ್ಟವನೂ ಕೂಡಲೇ ಭಯದಿಂದ ಬಿಡುಗಡೆ ಹೊಂದುವನು.

ನ ಕುತಶ್ಚಿದ್ ಭಯಂ ತಸ್ಯ ವಿದ್ಯಾಂ ಧಾರಯತೋ ಭವೇತ್ ।
ರಾಜದಸ್ಯುಗ್ರಹಾದಿಭ್ಯೋ ವ್ಯಾಧ್ಯಾದಿಭ್ಯಶ್ಚ ಕರ್ಹಿಚಿತ್ ॥ ೩೭ ॥

ಈ ನಾರಾಯಣವರ್ಮ ವಿದ್ಯೆಯನ್ನು ಧರಿಸಿಕೊಂಡಿರುವವನಿಗೆ ರಾಜರು, ಕಳ್ಳರು, ಗ್ರಹಗಳು ಇವೇ ಮೊದಲಾದವುಗಳಿಂದಲೂ ರೋಗವೇ ಮೊದಲಾದವು —ಹೀಗೆ ಯಾರಿಂದಲೂ ಎಂದೂ ಭಯವಿರಲಾರದು.

ಇಮಾಂ ವಿದ್ಯಾಂ ಪುರಾ ಕಶ್ಚಿತ್ ಕೌಶಿಕೋ ಧಾರಯನ್ ದ್ವಿಜಃ ।
ಯೋಗಧಾರಣಯಾ ಸ್ವಾಂಗಂ ಜಹೌ ಸ ಮರುಧನ್ವನಿ ॥ ೩೮ ॥

ತಸ್ಯೋಪರಿ ವಿಮಾನೇನ ಗಂಧರ್ವಪತಿರೇಕದಾ ।
ಯಯೌ ಚಿತ್ರರಥಃ ಸ್ತ್ರೀಭಿರ್ವೃತೋ ಯತ್ರ ದ್ವಿಜಕ್ಷಯಃ ॥೩೯॥

---

1 ನಾರಾಯಣಸಾನ್ನಿಧ್ಯಪ್ರಾಚುರ್ಯಪ್ರಾಪಕಂ. ನಾರಾಯಣೋ ವಾಯುಃ ಪ್ರಧಾನೋ ದೇವತಾ ಯಸ್ಯ ತದ್ವಾ ನಾರಾಯಣವಾಯುಮಿತಿ ಸತ್ಯಸಂಧತೀರ್ಥೈಃ ಯಥಾ ವ್ಯಾಖ್ಯಾತಂ ತದ್ವತ್ ನಾರಾಯಣಾತ್ಮಕಮಿತ್ಯಪಿ ।

2 ನಾರಾಯಣರೂಪೈರಾತತತ್ವಾತ್ ನಾರಾಯಣಾತ್ಮಕಮ್ —ರಾಮ

**ಸಾಂಗನೋ ನ್ಯಪತತ್ ಸದ್ಯಃ ಸವಿಮಾನೋ ಹ್ಯವಾಕ್‌ಶಿರಾಃ ।**
**ವಿದ್ಯಾಮಿಮಾಂ ಧಾರಯತೋ ಮೃತಸ್ಯಾಸ್ಥಿ ವಿಲಂಘನಾತ್ ॥೪೦॥**
**ಸ ವಾಲಖಿಲ್ಯವಚನಾದಸ್ಥೀನ್ಯಾದಾಯ ವಿಸ್ಮಿತಃ ।**
**ಪ್ರಾಸ್ಯ ಪ್ರಾಚೀಸರಸ್ವತ್ಯಾಂ ಸ್ನಾತ್ವಾ ಧಾಮ ಸ್ವಮನ್ವಗಾದ್ ॥೪೧॥**

ಈ ನಾರಾಯಣವರ್ಮವನ್ನು ಹಿಂದೆ ಕೌಶಿಕ[1] ಎಂಬ ಒಬ್ಬ ಬ್ರಾಹ್ಮಣನು ಧರಿಸಿಕೊಂಡಿದ್ದನು. ಅವನು ಬಂಜರು ಭೂಮಿಯಲ್ಲಿ ಯೋಗಧಾರಣೆಯಿಂದ ತನ್ನ ದೇಹವನ್ನು ತ್ಯಜಿಸಿದನು.[2] ಒಮ್ಮೆ ಚಿತ್ರರಥ ಎಂಬ ಗಂಧರ್ವಪತಿಯು ಸ್ತ್ರೀಯರಿಂದ ಕೂಡಿಕೊಂಡು ಆ ಕೌಶಿಕ ಬ್ರಾಹ್ಮಣ ಎಲ್ಲಿ ದೇಹವನ್ನು ತ್ಯಜಿಸಿದ್ದನೋ ಆ ಪ್ರದೇಶದ ಮೇಲೆ ವಿಮಾನದಿಂದ ಹೋಗುತ್ತಿದ್ದನು. ಕೂಡಲೇ ಚಿತ್ರರಥನು ತಲೆಕೆಳಗಾಗಿ ಸ್ತ್ರೀಯರಿಂದ ಕೂಡಿಕೊಂಡು, ವಿಮಾನ ಸಹಿತನಾಗಿ ಕೆಳಗೆ ಬೀಳುವನು. ನಾರಾಯಣ ಕವಚವನ್ನು ಧರಿಸಿಕೊಂಡಿದ್ದ ಕೌಶಿಕನ ಎಲುಬನ್ನು ದಾಟಿದುದರಿಂದಾಗಿ ಚಿತ್ರರಥನು ಬಿದ್ದನು. ವಾಲಖಿಲ್ಯರು ಅದಕ್ಕೆ ಕಾರಣವನ್ನು ತಿಳಿಸಿ, ಕೌಶಿಕನ ಎಲುಬನ್ನು ಪೂರ್ವಕ್ಕೆ ಹರಿಯುತ್ತಿರುವ ಸರಸ್ವತೀ ನದಿಯಲ್ಲಿ ಹಾಕಲು ತಿಳಿಸುವರು. ಈ ಬಗ್ಗೆ ಆಶ್ಚರ್ಯಚಕಿತನಾದ ಚಿತ್ರರಥ ಕೌಶಿಕನ ಅಸ್ಥಿಗಳನ್ನು ಸರಸ್ವತಿಯಲ್ಲಿ ಹಾಕಿ, ಸ್ನಾನಮಾಡಿ ತನ್ನ ಗಂಧರ್ವಲೋಕಕ್ಕೆ ತೆರಳಿದನು.

**ಯ ಇದಂ ಶೃಣುಯಾತ್ ಕಾಲೇ[3] ಯೋ ಧಾರಯತಿ ಚಾದೃತಃ**
**ತಂ ನಮಸ್ಯಂತಿ ಭೂತಾನಿ ಮುಚ್ಯತೇ ಸರ್ವತೋ [4]ಭಯಾತ್ ॥೪೨॥**

ಯಾರು ವಿಹಿತಕಾಲದಲ್ಲಿ ಇದರ ಶ್ರವಣ ನಡೆಸುವನೋ, ಯಾರು ಇದನ್ನು ಶ್ರದ್ಧಾಪೂರ್ವಕವಾಗಿ ಧರಿಸಿಕೊಳ್ಳುವನೋ ಅವನನ್ನು ಸಕಲಭೂತಗಳೂ ಗೌರವಿಸುವವು. ಅವನು ಎಲ್ಲ ವಿಧದ ಭಯದಿಂದಲೂ ಬಿಡುಗಡೆ ಹೊಂದುವನು. ಸಂಸಾರ ಭಯದಿಂದಲೂ ಬಿಡುಗಡೆ ಹೊಂದುವನು.

---

1 ಕೌಶಿಕಃ ಕುಶಿಕಗೋತ್ರೇ ಉತ್ಪನ್ನಃ —ಚಿಟ್ಸೀ
2 ಅನೇನ ವಿದ್ಯಾಯಾಃ ಕ್ಷೇತ್ರತೀರ್ಥಾನಪೇಕ್ಷತ್ವಂ ದರ್ಶಿತಮ್ —ಚಿಟ್ಸೀ
3 ಕಾಲೇ ವಿಹಿತೇ —ಸತ್ಯ
4 ಸರ್ವತೋ ಭಯಾತ್ ಸಂಸೃತೇರಿತಿ ವಾ —ಸತ್ಯ

**ಏತಾಂ ವಿದ್ಯಾಮಧಿಗತೋ ವಿಶ್ವರೂಪಾಚ್ಛತಕ್ರತುಃ ।**
**ತ್ರೈಲೋಕ್ಯಲಕ್ಷ್ಮೀಂ ಬುಭುಜೇ ವಿನಿರ್ಜಿತ್ಯ ಮೃಧೇಽಸುರಾನ್ ॥೪೩॥**

ಈ ನಾರಾಯಣಕವಚವನ್ನು ವಿಶ್ವರೂಪಾಚಾರ್ಯರಿಂದ ಪಡೆದುಕೊಂಡ ಇಂದ್ರನು, ಇದರ ಸಾಮರ್ಥ್ಯದಿಂದಾಗಿ ಯುದ್ಧದಲ್ಲಿ ಅಸುರರನ್ನು ಸೋಲಿಸಿ, ಮೂರುಲೋಕದ ಸಂಪತ್ತನ್ನು ಅನುಭವಿಸಿದನು.

**ಇತಿ ನಾರಾಯಣವರ್ಮ ಸಮಾಪ್ತಮ್**

**॥ ಶ್ರೀ ಕೃಷ್ಣಾರ್ಪಣಮಸ್ತು ॥**

# ಶ್ರೀ ಹಯಗ್ರೀವ ಕವಚಮ್

## ಸ್ಥೂಲವಾಹಿತಿ

ಅಥರ್ವವೇದದ ಮಂತ್ರಖಂಡದ ಪೂರ್ವ ಸಂಹಿತೆಯಲ್ಲಿ ಬಂದಿರುವ ಶ್ರೀ ಹಯಗ್ರೀವ ಕವಚ ೧೬ ಶ್ಲೋಕಗಳನ್ನೊಳಗೊಂಡಿದ್ದು ಮೊದಲ ಎಂಟು ಶ್ಲೋಕಗಳಲ್ಲಿ ಶ್ರೀ ಹಯಗ್ರೀವರೂಪಿ ಪರಮಾತ್ಮನ ಹಯಗ್ರೀವ, ಚಂದ್ರಮಧ್ಯಗ, ಶಾಸ್ತ್ರದೃಷ್ಟಿ—ಮುಂತಾದ ಹೆಸರುಗಳ ಉಲ್ಲೇಖದೊಂದಿಗೆ ತಲೆ, ಹಣೆ, ಕಣ್ಣು—ಮುಂತಾದ ಅವಯವಗಳನ್ನು ರಕ್ಷಿಸಲು ಪ್ರಾರ್ಥಿಸಿಕೊಳ್ಳಲಾಗಿದೆ. ೯ನೇ ಮತ್ತು ೧೦ನೇ ಶ್ಲೋಕಗಳಲ್ಲಿ ಭಾರ್ಯಾದಿಗಳ ರಕ್ಷಣೆಯನ್ನೂ, ೧೧, ೧೨ ಹಾಗೂ ೧೩ನೇ ಶ್ಲೋಕಗಳಲ್ಲಿ ಪೂರ್ವಾದಿ-ದಿಕ್ಕುಗಳಲ್ಲಿದ್ದುಕೊಂಡು ನೀಡಬೇಕಾದ ರಕ್ಷಣೆಯನ್ನೂ ಕೇಳಿಕೊಳ್ಳಲಾಗಿದೆ. ಕೊನೆಯ ಎರಡು ಶ್ಲೋಕಗಳಲ್ಲಿ ತಿಳಿಸಲಾದ 'ಫಲಶ್ರುತಿ'ಯಲ್ಲಿ ಸರ್ವಶಾಸ್ತ್ರಪ್ರವಕ್ತೃತ್ವ—ಸಕಲ ಶಾಸ್ತ್ರಗಳ ಪ್ರವಚನವನ್ನು ನೀಡುವ ಸಾಮರ್ಥ್ಯವೂ ಸಿದ್ಧಿಸುವುದೆಂದು ಉಲ್ಲೇಖಿಸಿರುವುದು ಗಮನಾರ್ಹ. ಶ್ರೀ ಹಯಗ್ರೀವರೂಪಿ ಪರಮಾತ್ಮ ಸರ್ವತೋಮುಖವಾದ ರಕ್ಷಣೆಯನ್ನು ನೀಡುತ್ತಿರುವನೆಂಬ ಅನುಸಂಧಾನಕ್ಕೆ ಪೋಷಕವಾಗಿ ಹೊರಟ ಈ ಕವಚದಲ್ಲಿ ಹಯಗ್ರೀವನ ಮೂಲರೂಪಕ್ಕೆ ಸಂಬಂಧಿಸಿದ ಪದ್ಮನಾಭ, ದಾಮೋದರ, ಲಕ್ಷ್ಮೀಪತಿ ಮುಂತಾದ ಹೆಸರುಗಳ ಜೊತೆಗೆ ಹಯಗ್ರೀವರೂಪಕ್ಕೆ ಅಸಾಧಾರಣವಾಗಿ ಸಂಬಂಧಪಡುವ ಚಂದ್ರ-ಮಧ್ಯಗ, ಶಾಸ್ತ್ರದೃಷ್ಟಿ, ಶಬ್ದಬ್ರಹ್ಮಾತ್ಮಕ [ಶಬ್ದಬ್ರಹ್ಮ ಎನಿಸುವ ವೇದಕ್ಕೆ ಒಡೆಯ] ಬ್ರಹ್ಮಾತ್ಮಕ, ವಿದ್ಯಾತ್ಮಾ, ಜ್ಞಾನಾತ್ಮಾ, ಗುಹ್ಯಾರ್ಥ ಬೋಧಕೃತ್ [ಶಾಸ್ತ್ರದ ರಹಸ್ಯಾ-ರ್ಥದ ಸ್ಫೂರ್ತಿಯನ್ನು ಅನುಗ್ರಹಿಸುವವನು] —ಮುಂತಾದ ಹೆಸರುಗಳ ಉಲ್ಲೇಖವೂ ಬಂದಿದೆ.

ಈ ಕವಚದ ಮೊದಲು ಮೂರು ಶ್ಲೋಕಗಳಲ್ಲಿ ನಿರೂಪಿಸಿರುವಂತೆ ಕವಚವನ್ನು ಪಠಿಸುವಾಗ ಧ್ಯಾನಿಸಬೇಕಾದ ಹಯಗ್ರೀವನ ರೂಪ ಇದು—ದೇವತೆಗಳಿಗೆಲ್ಲ ಒಡೆಯನಾದ ಹಯಗ್ರೀವ ಚಂದ್ರನಲ್ಲಿರುವ ಕಮಲದ ಮಧ್ಯಭಾಗದಲ್ಲಿನೆಲೆಸಿರುವವನು. ಕಮಲದ ಎಸಳಿನಂತೆ ದೀರ್ಘವಾದ ಕಣ್ಣುಗಳುಳ್ಳವನು. ನಾಲ್ಕು ಕೈಗಳಲ್ಲಿ ಜ್ಞಾನಮುದ್ರೆ, ಅಕ್ಷಮಾಲೆ, ಶಂಖ ಹಾಗೂ ಚಕ್ರ ಇವುಗಳನ್ನು ಧರಿಸಿರುವವನು. ಧರಿಸಿಕೊಂಡ ತನ್ನ ಆಭರಣಗಳ ಕಾಂತಿಯ ಸಮೂಹದಿಂದ ದಿಕ್ಕು ದಿಕ್ಕುಗಳನ್ನೆಲ್ಲ ಬೆಳಗಿರುವವನು. ಮುಖಕಮಲದಿಂದ ವೇದ ವಚನಗಳ ರಾಶಿಯನ್ನು ಹೊರಹೊಮ್ಮಿಸುತ್ತಿರುವವನು. ಇಷ್ಟಾರ್ಥಸಿದ್ಧಿಗಾಗಿ ಇಂತಹ ಹಯಗ್ರೀವನನ್ನು ಧ್ಯಾನಿಸಬೇಕು.

   

## ಅಥ ಶ್ರೀ ಹಯಗ್ರೀವ ಕವಚಮ್ :

ಅಸ್ಯ ಶ್ರೀ ಹಯಗ್ರೀವಕವಚಮಹಾಮಂತ್ರಸ್ಯ
ಹಯಗ್ರೀವ ಋಷಿಃ ಅನುಷ್ಟುಪ್ ಛಂದಃ ।
ಶ್ರೀ ಹಯಗ್ರೀವಃ ಪರಮಾತ್ಮಾ ದೇವತಾ ।
ಮಮ ಹಯಗ್ರೀವಪ್ರಸಾದಸಿದ್ಧ್ಯರ್ಥೇ ಜಪೇ ವಿನಿಯೋಗಃ ॥

ಕಲಶಾಂಬುಧಿಸಂಕಾಶಂ ಕಮಲಾಯತಲೋಚನಮ್ ।
ಕಲಾನಿಧಿಕೃತಾವಾಸಂ ಕರ್ಣಿಕಾಂತರವಾಸಿನಮ್ ॥ ೧ ॥

ಜ್ಞಾನಮುದ್ರಾಕ್ಷವಲಯಶಂಖಚಕ್ರಲಸತ್ಕರಮ್ ।
ಭೂಷಾಕಿರಣಸಂದೋಹವಿರಾಜಿತದಿಗಂತರಮ್ ॥ ೨ ॥

ವಕ್ತ್ರಾಬ್ಜನಿರ್ಗತೋದ್ದಾಮವಾಣೀಸಂತಾನಶೋಭಿತಮ್ ।
ದೇವತಾಸಾರ್ವಭೌಮಂ ತಂ ಧ್ಯಾಯೇದಿಷ್ಟಾರ್ಥಸಿದ್ಧಯೇ ॥ ೩ ॥

ಓಂ ಹಯಗ್ರೀವಶ್ಶಿರಃ ಪಾತು ಲಲಾಟಂ ಚಂದ್ರಮಧ್ಯಗಃ ।
ಶಾಸ್ತ್ರದೃಷ್ಟಿರ್ದೃಶೌ ಪಾತು ಶಬ್ದಬ್ರಹ್ಮಾತ್ಮಕಶ್ಶ್ರುತೀ ॥ ೧ ॥

ಘ್ರಾಣಂ ಗಂಧಾತ್ಮಕಃ ಪಾತು ವದನಂ ಯಜ್ಞಸಂಭವಃ ।
ಜಿಹ್ವಾಂ ವಾಗೀಶ್ವರಃ ಪಾತು ಮುಕುಂದೋ ದಂತಸಂತತೀಃ ॥ ೨ ॥

ಓಷ್ಠಂ ಬ್ರಹ್ಮಾತ್ಮಕಃ ಪಾತು ಪಾತು ನಾರಾಯಣೋಽಧರಮ್ ।
ಶಿವಾತ್ಮಾ ಚಿಬುಕಂ ಪಾತು ಕಪೋಲೌ ಕಮಲಾಪ್ರಭುಃ ॥ ೩ ॥

ವಿದ್ಯಾತ್ಮಾ ಪೀಠಕಂ ಪಾತು ಕಂಠಂ ನಾದಾತ್ಮಕೋ ಮಮ ।
ಭುಜೌ ಚತುರ್ಭುಜಃ ಪಾತು ಕರೌ ದೈತ್ಯೇಂದ್ರಮರ್ದನಃ ॥ ೪ ॥

ಜ್ಞಾನಾತ್ಮಾ ಹೃದಯಂ ಪಾತು ವಿಶ್ವಾತ್ಮಾ ತು ಕುಚದ್ವಯಮ್ ।
ಮಧ್ಯಮಂ ಪಾತು ಸರ್ವಾತ್ಮಾ ಪಾತು ಪೀತಾಂಬರಃ ಕಟಿಮ್ ॥ ೫ ॥

ಕುಕ್ಷಿಂ ಕುಕ್ಷಿಸ್ಥವಿಶ್ವೋ ಮೇ ಬಲಿಭಂಗೋ ಬಲಿತ್ರಯಮ್ ।
ನಾಭಿಂ ಮೇ ಪದ್ಮನಾಭೋಽವ್ಯಾದ್ ಗುಹ್ಯಂ ಗುಹ್ಯಾರ್ಥಬೋಧಕೃತ್ ॥೬॥

ಊರೂ ದಾಮೋದರಃ ಪಾತು ಜಾನುನೀ ಮಧುಸೂದನಃ ।
ಪಾತು ಜಂಘೇ ಮಹಾವಿಷ್ಣುರ್ಗುಲ್ಫೌ ಪಾತು ಜನಾರ್ದನಃ ॥ ೭ ॥

ಪಾದೌ ತ್ರಿವಿಕ್ರಮಃ ಪಾತು ಪಾತು ಪಾದಾಂಗುಳೀರ್ಹರಿಃ ।
ಸರ್ವಾಂಗಂ ಸರ್ವಗಃ ಪಾತು ಪಾತು ರೋಮಾಣಿ ಕೇಶವಃ ॥ ೮ ॥

ಧಾತೂನ್ನಾಡೀಗತಃ ಪಾತು ಭಾರ್ಯಾಂ ಲಕ್ಷ್ಮೀಪತಿರ್ಮಮ ।
ಪುತ್ರಾನ್ ವಿಶ್ವಕುಟುಂಬೀ ಮೇ ಪಾತು ಬಂಧೂನ್ ಸುರೇಶ್ವರಃ ॥ ೯ ॥

ಮಿತ್ರಂ ಮಿತ್ರಾತ್ಮಕಃ ಪಾತು ವಹ್ನ್ಯಾತ್ಮಾ ಶತ್ರುಸಂಹತೀಃ ।
ಪ್ರಾಣಾನ್ ವಾಯ್ವಾತ್ಮಕಃ ಪಾತು ಕ್ಷೇತ್ರಂ ವಿಶ್ವಂಭರಾತ್ಮಕಃ ॥ ೧೦ ॥

ವರುಣಾತ್ಮಾ ರಸಾನ್ಪಾತು ವ್ಯೋಮಾತ್ಮಾ ಹೃದ್ಗುಹಾಂತರಮ್ ।
ದಿವಾರಾತ್ರಂ ಹೃಷೀಕೇಶಃ ಪಾತು ಸರ್ವಂ ಜಗದ್ಗುರುಃ ॥ ೧೧ ॥

ವಿಷಮೇ ಸಂಕಟೇ ಚೈವ ಪಾತು ಕ್ಷೇಮಂಕರೋ ಮಮ ।
ಸಚ್ಚಿದಾನಂದರೂಪೋ ಮೇ ಜ್ಞಾನಂ ರಕ್ಷತು ಸರ್ವದಾ ॥ ೧೨ ॥

ಪ್ರಾಚ್ಯಾಂ ರಕ್ಷತು ಸರ್ವಾತ್ಮಾ ಆಗ್ನೇಯ್ಯಾಂ ಜ್ಞಾನದೀಪಕಃ ।
ಯಾಮ್ಯಾಂ ಬೋಧಪ್ರದಃ ಪಾತು ನೈರ್ಋತ್ಯಾಂ ಚಿದ್ಘನಪ್ರಭಃ ॥೧೩॥

ವಿದ್ಯಾನಿಧಿಸ್ತು ವಾರುಣ್ಯಾಂ ವಾಯವ್ಯಾಂ ಚಿನ್ಮಯೋಽವತು ।
ಕೌಬೇರ್ಯಾಂ ವಿತ್ತದಃ ಪಾತು ಐಶಾನ್ಯಾಂ ಚ ಜಗದ್ಗುರುಃ ॥೧೪॥

ಊರ್ಧ್ವಂ ಪಾತು ಜಗತ್ಸ್ವಾಮೀ ಪಾತ್ವಧಸ್ತಾತ್ ಪರಾತ್ಪರಃ ।
ರಕ್ಷಾಹೀನಂ ತು ಯತ್ಸ್ಥಾನಂ ರಕ್ಷತ್ವಖಿಲನಾಯಕಃ ॥ ೧೫ ॥

ಏವಂ ನ್ಯಸ್ತಶರೀರೋಽಸೌ ಸಾಕ್ಷಾದ್ವಾಗೀಶ್ವರೋ ಭವೇತ್ ।
ಆಯುರಾರೋಗ್ಯಮೈಶ್ವರ್ಯಂ ಸರ್ವಶಾಸ್ತ್ರಪ್ರವಕ್ತೃತಾಮ್ ।
ಲಭತೇ ನಾತ್ರ ಸಂದೇಹೋ ಹಯಗ್ರೀವಪ್ರಸಾದತಃ ।
ಇತೀದಂ ಕೀರ್ತಿತಂ ದಿವ್ಯಂ ಕವಚಂ ದೇವಪೂಜಿತಮ್ ॥

ಇತಿ ಅಥರ್ವವೇದೇ ಮಂತ್ರಖಂಡೇ ಪೂರ್ವಸಂಹಿತಾಯಾಂ ಹಯಗ್ರೀವಕವಚಂ ಸಂಪೂರ್ಣಮ್

x x x x

# ಶ್ರೀವಿಷ್ಣು ಕವಚಮ್

## ಸ್ಥೂಲ ಮಾಹಿತಿ

೩೦ ಶ್ಲೋಕಗಳನ್ನು ಹೊಂದಿರುವ "ವಿಷ್ಣು ಕವಚ" ಗರುಡ ಪುರಾಣದಲ್ಲಿ ಪ್ರಸ್ತುತವಾದದ್ದು. ಶ್ರೀ ವಿಷ್ಣುವಿನ ವಿಷ್ಣು, ಕೃಷ್ಣ, ಹರಿ ಮುಂತಾದ ನಾಮಗಳ ಉಲ್ಲೇಖದೊಂದಿಗೆ ಎದುರು, ಹಿಂದೆ, ಮೇಲೆ, ಕೆಳಗೆ, ಜಲ, ಕಾಡು ಮುಂತಾದೆಡೆಗಳಲ್ಲಿ ರಕ್ಷಣೆ ನೀಡುವಂತೆ ಹಾಗೂ ಶಿರಸ್ಸು, ಹೃದಯ, ಮನಸ್ಸು—ಮುಂತಾದ ಇಂದ್ರಿಯಗಳಿಗೆ ರಕ್ಷಣೆ ಅನುಗ್ರಹಿಸುವಂತೆ ಪ್ರಾರ್ಥಿಸಲಾಗಿದೆ. ಶತ್ರುಗಳ ಸಂಹಾರ, ಪಾಪದ, ದೋಷಗಳ ಪರಿಹಾರ, ಅಜ್ಞಾನದ ನಾಶ, ಮುಂತಾದವುಗಳನ್ನು ಕೇಳಿಕೊಳ್ಳಲಾಗಿದೆ. ಶ್ರೀವಿಷ್ಣುವಿನ ಚಕ್ರ, ಗದಾ, ಒನಕೆ ಮುಂತಾದ ಆಯುಧಗಳಿಂದಲೂ, ಶ್ರೀವಿಷ್ಣುವಿನ ಅವೇಶಕ್ಕೊಳಗಾದ ಶೇಷ ಬಲರಾಮ—ಇವರಿಂದಲೂ ರಕ್ಷಣೆಯನ್ನು ಪ್ರಾರ್ಥಿಸಲಾಗಿದೆ. ಪ್ರಾರ್ಥನೆ ಕ್ರಮಬದ್ಧವಾಗಿರದೆ, ವಿಕ್ಷಿಪ್ತವಾಗಿದೆಯಷ್ಟೇ. ಶ್ರೀ ವಿಷ್ಣುವಿನ ಕಪಿಲ [ವೈದಿಕ ಸಾಂಖ್ಯಾಚಾರ್ಯ] ಹಂಸ, ವಡವಾಮುಖ, ದತ್ತಾತ್ರೇಯ ಮುಂತಾದ ರೂಪಗಳೂ ಉಲ್ಲೇಖಗೊಂಡಿದೆ. ಕೊನೆಯ ಹನ್ನೆರಡು ಶ್ಲೋಕಗಳಲ್ಲಿ "ಫಲಶ್ರುತಿ"ಯ ವಿಸ್ತಾರ ಬಂದಿದೆ.

   

# ಅಥ ವಿಷ್ಣುಕವಚಮ್

**ಹರಿರುವಾಚ—**

ಸರ್ವವ್ಯಾಧಿಹರಂ ವಕ್ಷ್ಯೇ ವೈಷ್ಣವಂ ಕವಚಂ ಶುಭಮ್ ।
ಯೇನ ರಕ್ಷಾ ಕೃತಾ ಶಂಭೋರ್ನಾತ್ರ ಕಾರ್ಯಾ ವಿಚಾರಣಾ ॥ ೧ ॥

ಪ್ರಣಮ್ಯ ದೇವಮೀಶಾನಮಜಂ ನಿತ್ಯಮನಾಮಯಮ್ ।
ದೇವಂ ಸರ್ವೇಶ್ವರಂ ವಿಷ್ಣುಂ ಸರ್ವವ್ಯಾಪಿನಮವ್ಯಯಮ್ ॥ ೨ ॥

ಬಧ್ನಾಮ್ಯಹಂ ಪ್ರತೀಕಾರಂ ನಮಸ್ಕೃತ್ಯ ಜನಾರ್ದನಮ್ ।
ಅಮೋಘಾಪ್ರತಿಮಂ ಸರ್ವಂ ಸರ್ವದುಃಖನಿವಾರಣಮ್ ॥ ೩ ॥

ವಿಷ್ಣುರ್ಮಾಮಗ್ರತಃ ಪಾತು ಕೃಷ್ಣೋ ರಕ್ಷತು ಪೃಷ್ಠತಃ ।
ಹರಿರ್ಮೇ ರಕ್ಷತು ಶಿರೋ ಹೃದಯಂ ಚ ಜನಾರ್ದನಃ ॥ ೪ ॥

ಮನೋ ಮಮ ಹೃಷೀಕೇಶೋ ಜಿಹ್ವಾಂ ರಕ್ಷತು ಕೇಶವಃ ।
ಪಾತು ನೇತ್ರೇ ವಾಸುದೇವಃ ಶ್ರೋತ್ರೇ ಸಂಕರ್ಷಣೋ ವಿಭುಃ ॥ ೫ ॥

ಪ್ರದ್ಯುಮ್ನಃ ಪಾತು ಮೇ ಘ್ರಾಣಮನಿರುದ್ಧಸ್ತು ಚರ್ಮ ಚ ।
ವನಮಾಲೀ ಗಲಸ್ಯಾಂತಂ ಶ್ರೀವತ್ಸೋ ರಕ್ಷತಾಮಧಃ ॥ ೬ ॥

ಪಾರ್ಶ್ವಂ ರಕ್ಷತು ಮೇ ಚಕ್ರಂ ವಾಮಂ ದೈತ್ಯನಿವಾರಣಮ್ ।
ದಕ್ಷಿಣಂ ತು ಗದಾದೇವೀ ಸರ್ವಾಸುರನಿವಾರಿಣೀ ॥ ೭ ॥

ಉದರಂ ಮುಸಲಂ ಪಾತು ಪೃಷ್ಠಂ ಮೇ ಪಾತು ಲಾಂಗಲಮ್ ।
ಊರ್ಧ್ವಂ ರಕ್ಷತು ಮೇ ಶಾರ್ಗಂ ಜಂಘೇ ರಕ್ಷತು ನಂದಕಃ ॥ ೮ ॥

ಪಾರ್ಷ್ಣೀ ರಕ್ಷತು ಶಂಖಶ್ಚ ಪದ್ಮಂ ಮೇ ಚರಣಾವುಭೌ ।
ಸರ್ವಕಾರ್ಯಾರ್ಥಸಿದ್ಧ್ಯರ್ಥಂ ಪಾತು ಮಾಂ ಗರುಡಃ ಸದಾ ॥ ೯ ॥

ವರಾಹೋ ರಕ್ಷತು ಜಲೇ ವಿಷಮೇಷು ಚ ವಾಮನಃ ।
ಅಟವ್ಯಾಂ ನಾರಸಿಂಹಶ್ಚ ಸರ್ವತಃ ಪಾತು ಕೇಶವಃ ॥ ೧೦ ॥

ಹಿರಣ್ಯಗರ್ಭೋ ಭಗವಾನ್ ಹಿರಣ್ಯಂ ಮೇ ಪ್ರಯಚ್ಛತು ।
ಸಾಂಖ್ಯಾಚಾರ್ಯಸ್ತು ಕಪಿಲೋ ಧಾತುಸಾಮ್ಯಂ ಕರೋತು ಮೇ ॥ ೧೧ ॥

ಶ್ವೇತದ್ವೀಪನಿವಾಸೀ ಚ ಶ್ವೇತದ್ವೀಪಂ ನಯತ್ವಜಃ ।
ಸರ್ವಾನ್ ಶತ್ರೂನ್ ಸೂದಯತು ಮಧುಕೈಟಭಸೂದನಃ ॥ ೧೨ ॥

ವಿಷ್ಣುಃ ಸದಾ ಚಾಕರ್ಷತು ಕಿಲ್ಬಿಷಂ ಮಮ ವಿಗ್ರಹಾತ್ ।
ಹಂಸೋ ಮತ್ಸ್ಯಸ್ತಥಾ ಕೂರ್ಮಃ
ಪಾತು ಮಾಂ ಸರ್ವತೋದಿಶಮ್ ॥ ೧೩ ॥

ತ್ರಿವಿಕ್ರಮಸ್ತು ಮೇ ದೇವಃ ಸರ್ವಾನ್ ಪಾಪಾನ್ ನಿಗೃಹ್ಣತು ।
ತಥಾ ನಾರಾಯಣೋ ದೇವೋ ಬುದ್ಧಿಂ ಪಾಲಯತಾಂ ಮಮ ॥ ೧೪ ॥

ಶೇಷೋ ಮೇ ನಿರ್ಮಲಂ ಜ್ಞಾನಂ ಕರೋತ್ವಜ್ಞಾನನಾಶನಮ್ ।
ವಡವಾಮುಖೋ ನಾಶಯತು ಕಲ್ಮಷಂ ಯತ್ಕೃತಂ ಮಯಾ ॥ ೧೫ ॥

ಪದ್ಭ್ಯಾಂ ದದಾತು ಪರಮಂ ಸುಖಂ ಮೂರ್ಧ್ನಿ ಮಮ ಪ್ರಭುಃ ।
ದತ್ತಾತ್ರೇಯಃ ಕಲಯತು ಸಪುತ್ರಪಶುಬಾಂಧವಮ್ ॥ ೧೬ ॥

ಸರ್ವಾನರೀನ್ ನಾಶಯತು ರಾಮಃ ಪರಶುನಾ ಮಮ ।
ರಕ್ಷೋಘ್ನಸ್ತು ದಾಶರಥಿಃ ಪಾತು ನಿತ್ಯಂ ಮಹಾಭುಜಃ ॥ ೧೭ ॥

ಶತ್ರೂನ್ ಹಲೇನ ಮೇ ಹನ್ಯಾತ್ ರಾಮೋ ಯಾದವನಂದನಃ ।
ಪ್ರಲಂಬಕೇಶಿಚಾಣೂರ ಪೂತನಾ ಕಂಸನಾಶನಃ ।
ಕೃಷ್ಣಸ್ಯ ಯೋ ಬಾಲಭಾವಃ ಸ ಮೇ ಕಾಮಾನ್ ಪ್ರಯಚ್ಛತು ॥ ೧೮ ॥

ಅಂಧಕಾರತಮೋಘೋರಂ ಪುರುಷಂ ಕೃಷ್ಣಪಿಂಗಲಮ್ ।
ಪಶ್ಯಾಮಿ ಭಯಸಂತ್ರಸ್ತಃ ಪಾಶಹಸ್ತಮಿವಾಂತಕಮ್ ॥ ೧೯ ॥

ತತೋಽಹಂ ಪುಂಡರೀಕಾಕ್ಷಮಚ್ಯುತಂ ಶರಣಂ ಗತಃ ।
ಧನ್ಯೋಽಹಂ ನಿರ್ಭಯೋ ನಿತ್ಯಂ ಯಸ್ಯ ಮೇ ಭಗವಾನ್ ಹರಿಃ ॥ ೨೦ ॥

ಧ್ಯಾತ್ವಾ ನಾರಾಯಣಂ ದೇವಂ ಸರ್ವೋಪದ್ರವನಾಶನಮ್ ।
ವೈಷ್ಣವಂ ಕವಚಂ ಬದ್ಧ್ವಾ ವಿಚರಾಮಿ ಮಹೀತಲೇ ॥ ೨೧ ॥

ಅಪ್ರಧೃಷ್ಯೋಽಸ್ಮಿ ಭೂತಾನಾಂ ಸರ್ವದೇವಮಯೋ ಹ್ಯಹಮ್ ।
ಸ್ಮರಣಾದ್ದೇವದೇವಸ್ಯ ವಿಷ್ಣೋರಮಿತತೇಜಸಃ ॥ ೨೨ ॥

ಸಿದ್ಧಿರ್ಭವತು ಮೇ ನಿತ್ಯಂ ಯಥಾ ಮಂತ್ರಮುದಾಹೃತಮ್ ।
ಯೋ ಮಾಂ ಪಶ್ಯತಿ ಚಕ್ಷುರ್ಭ್ಯಾಂ ಯಂ ಚ ಪಶ್ಯಾಮಿ ಚಕ್ಷುಷಾ ॥ ೨೩ ॥

ಸರ್ವೇಷಾಂ ಪಾಪದುಷ್ಟಾನಾಂ ವಿಷ್ಣುರ್ಬಧ್ನಾತಿ ಚಕ್ಷುಷೀ ।
ವಾಸುದೇವಸ್ಯ ಯಚ್ಚಕ್ರಂ ತಸ್ಯ ಚಕ್ರಸ್ಯ ಯೇ ತ್ವರಾಃ ॥ ೨೪ ॥

ತೇ ಹಿ ಛಿಂದಂತು ಪಾಪಾನ್ಮೇ ಮಮ ಹಿಂಸಾಂ ಶು ಹಿಂಸಕಾನ್ ।
ರಾಕ್ಷಸೇಷು ಪಿಶಾಚೇಷು ಕಾಂತಾರೇಷ್ವಟವೀಷು ಚ ॥ ೨೫ ॥

ವಿವಾದೇ ರಾಜಮಾರ್ಗೇಷು ದ್ಯೂತೇಷು ಕಲಹೇಷು ಚ ।
ನದೀಸಂತಾರಣೇ ಘೋರೇ ಸಂಪ್ರಾಪ್ತೇ ಪ್ರಾಣಸಂಶ್ರಯೇ ॥ ೨೬ ॥

ಅಗ್ನಿಚೌರನಿಪಾತೇಷು ಸರ್ವಗ್ರಹನಿವಾರಣೇ ।
ವಿದ್ಯುತ್ಸರ್ಪವಿಷೋದ್ವೇಗೇ ರೋಗೇ ಪಾ ವಿಘ್ನಸಂಕಟೇ ॥ ೨೭ ॥

ಜಪ್ಯಮೇತಜ್ಜಪೇನ್ನಿತ್ಯಂ ಶರೀರೇ ಭಯಮಾಗತೇ ।
ಅಯಂ ಭಗವತೋ ಮಂತ್ರೋ ಮಂತ್ರಾಣಾಂ ಪರಮೋ ಮಹಾನ್ ॥೨೮॥

ವಿಖ್ಯಾತಂ ಕವಚಂ ಗುಹ್ಯಂ ಸರ್ವಪಾಪಪ್ರಣಾಶನಮ್ ।
ಸ್ವಮಾಯಾಕೃತನಿರ್ಮಾಣಕಲ್ಪಾಂತಗಹನಂ ಮಹತ್ ॥ ೨೯ ॥

ಅನಾದ್ಯಂತ! ಜಗದ್ಬೀಜ! ಪದ್ಮನಾಭ! ನಮೋಽಸ್ತು ತೇ ॥ ೩೦ ॥

ವಾಸುದೇವಃ ಸಂಕರ್ಷಣಃ ಪ್ರದ್ಯುಮ್ನಶ್ಚಾನಿರುದ್ಧಕಃ ।
ಸರ್ವಜ್ವರಾನ್ಮಮ ಘ್ನಂತು ವಿಷ್ಣುರ್ನಾರಾಯಣೋ ಹರಿಃ ॥

ಇತಿ ಗರುಡ ಪುರಾಣೋಕ್ತಂ [ಪೂರ್ವಖಂಡ ೧೯೪ ತಮ-ಅಧ್ಯಾಯೇ] ವಿಷ್ಣುಕವಚಮ್ ॥

X X X X

# ಶ್ರೀ ವೇಂಕಟೇಶಪಂಜರ ಸ್ತೋತ್ರಮ್

## ಸ್ಥೂಲಮಾಹಿತಿ

ಆಗ್ನೇಯ ಪುರಾಣದ ಶ್ರೀ ವೇಂಕಟೇಶ ಪಂಜರ ಸ್ತೋತ್ರವು ೧೪ ಶ್ಲೋಕಗಳನ್ನೊಳಗೊಂಡಿದ್ದು, ಮೊದಲ ಏಳು ಶ್ಲೋಕಗಳಲ್ಲಿ ತಲೆಯಿಂದ ಪ್ರಾರಂಭಿಸಿ, ಪಾದದವರೆಗೆ ಬೇರೆ ಬೇರೆ ಅಂಗಗಳ ರಕ್ಷಣೆಯನ್ನು ಪ್ರಾರ್ಥಿಸಲಾಗಿದೆ. ಮುಂದೆ ನಾಲ್ಕು ಶ್ಲೋಕಗಳಲ್ಲಿ ಪುತ್ರಾದಿಗಳನ್ನು ರಕ್ಷಿಸಲು ಕೇಳಿಕೊಳ್ಳಲಾಗಿದೆ. ಕೊನೆಯ ಮೂರು ಶ್ಲೋಕಗಳಲ್ಲಿ 'ಫಲಶ್ರುತಿ'ಯ ನಿರೂಪಣೆ ಬಂದಿದೆ.

ಶ್ರೀ ವೇಂಕಟೇಶನ ಮೂಲರೂಪಕ್ಕೆ ಸಂಬಂಧಿಸಿದ ವರಾಹ, ಇಂದಿರಾನಾಥ, ಅಬ್ಜನಾಭ, ಕಮಠರೂಪಧೃತ್ ಮುಂತಾದ ಹೆಸರುಗಳೊಂದಿಗೆ, ವೇಂಕಟೇಶರೂಪಕ್ಕಷ್ಟೇ ಸಂಬಂಧಿಸಿದ ಪದ್ಮಾಪತಿ, ಸ್ವಾಮಿಶೈಲೇಂದ್ರ, ನಾರಾಯಣಾದ್ರಿಗ, ಆಕಾಶಗಂಗಗ, ಪಾಂಡವತೀರ್ಥಗ, ಕುಮಾರಧಾರಿಕಾವಾಸ, ವೇಂಕಟಾದ್ರಿಶಿಖಾಮಣಿ, ಶ್ವೇತಭೂಧರರೂಪ—ಮುಂತಾದ ನಾಮಗಳ ಉಲ್ಲೇಖವೂ ಇವರಲ್ಲಿ ಬಂದಿದೆ. ಆಯಾ ಸಂದರ್ಭಕ್ಕೆ ಹೊಂದಿಕೆಯಾಗುವಂತೆ ನಾಮಗಳನ್ನು ಉಲ್ಲೇಖಿಸುವ ವಿವಕ್ಷೆ ಕಂಡು ಬರುವುದಿಲ್ಲ.

X X X X

# ಶ್ರೀ ವೇಂಕಟೇಶಪಂಜರಸ್ತೋತ್ರಮ್

ಅಸ್ಯ ಶ್ರೀ ವೇಂಕಟೇಶಪಂಜರಮಂತ್ರಸ್ಯ ಭೃಗು ಋಷಿಃ ।
ಅನುಷ್ಟುಪ್ ಛಂದಃ । ಶ್ರೀ ವೇಂಕಟೇಶೋ ದೇವತಾ ।
ಶ್ರೀನಿವಾಸಪ್ರಸಾದಸಿದ್ಧ್ಯರ್ಥೇ ಜಪೇ ವಿನಿಯೋಗಃ ।

ಧ್ಯಾನಮ್ —

ಧ್ಯಾಯೇದ್ವೇಂಕಟನಾಯಕಂ ಕರಯುಗೇ ಶಂಖಂ ಚ ಚಕ್ರಂ ಮುದಾ
ಚಾನ್ಯಂ ಪಾಣಿಯುಗಂ ಪರಂ ಕಟಿತಟೇ ಬಿಭ್ರಾಣಮರ್ಕಚ್ಛವಿಮ್ ।
ದೇವಂ ದೇವಶಿಖಾಮಣಿಂ ಶ್ರಿಯಮಹೋ ದಕ್ಷೇ ದಧಾನಂ ಭುಜೇ ।
ಭೂಷಾಜಾಲಮನೇಕರತ್ನಖಚಿತಂ ವಜ್ರೈಃ ಕಿರೀಟಾಂಗದೈಃ ॥

ವರಾಹಃ ಪಾತು ಶೀರ್ಷಂ ಮೇ ಕೇಶಾನ್ ಶ್ರೀ ವೇಂಕಟೇಶ್ವರಃ ।
ಶಿಖಾಮಿಳಾಪತಿಃ ಕರ್ಣೌ ಲಲಾಟಂ ದಿವ್ಯವಿಗ್ರಹಃ ॥ ೧ ॥

ನೇತ್ರೇ ಯುಗಾಂತಸ್ಥಾಯೀ ಮೇ ಕಪೋಲೌ ಕನಕಾಂಬರಃ ।
ನಾಸಿಕಾಮಿಂದಿರಾನಾಥೋ ವಕ್ತ್ರಂ ಬ್ರಹ್ಮಾದಿಪೂಜಿತಃ ॥ ೨ ॥

ಚುಬುಕಂ ಕಾಮದಃ ಕಂಠಮಗಸ್ತ್ಯಾಭೀಷ್ಟದಾಯಕಃ ।
ಅಂಸೌ ಕಂಸಾಂತಕಃ ಪೃಷ್ಠಂ ಕಮಲೀ ಸ್ತನಮಂಡಲಮ್ ॥ ೩ ॥

ಪಾರ್ಶ್ವಬ್ಜನಾಭಃ ಕ್ಷ್ಮಾಭೃನ್ಮೇ ಕುಕ್ಷಿಂ ಕಾಲಾಂಬುದದ್ಯುತಿಃ ।
ನಾಭಿಂ ಪದ್ಮಾಪತಿಃ ಪಾತು ಕರೌ ಕಲ್ಮಷನಾಶನಃ ॥ ೪ ॥

ಸ್ವಂಗುಲೀಃ ಸ್ವಾಮಿಶೈಲೇಂದ್ರೋ ನಖಾನ್ ನಾರಾಯಣಾದ್ರಿಗಃ ।
ಕಟಿಂ ಕೋಲಧರಃ ಪಾತು ಗುಹ್ಯಂ ಕಮಠರೂಪಧೃತ್ ॥ ೫ ॥

ಊರೂ ತುಂಬುರುಗಾನಜ್ಞೋ ಜಾನೂ ಪಾಪವಿನಾಶನಃ ।
ಜಂಘೇ ಜಗದ್ಧಿತಕರಃ ಪಾದೌ ಪಾತು ಹರಿಃ ಪುಮಾನ್ ॥ ೬ ॥

ಪಾದೌ ಪದ್ಮಾಪತಿಃ ಪಾತು ಗುಲ್ಫಾವಾಕಾಶಗಂಗಗಃ ।
ದಿಶೋ ದಿಕ್ಪಾಲವಂದ್ಯಾಂಘ್ರಿರ್ಭಾರ್ಯಾಯಾಂ ಪಾಂಡವತೀರ್ಥಗಃ ॥ ೭ ॥

ಅವ್ಯಾತ್ ಪುತ್ರಂ ಶ್ರೀನಿವಾಸಃ ಸರ್ವಕಾರ್ಯಾಣಿ ಗೋತ್ರರಾಟ್ ।
ವೇಂಕಟೇಶಃ ಸದಾ ಪಾತು ಮದ್ಭಾಗ್ಯಾನ್ ವೇದಪೂಜಿತಃ ॥ ೮ ॥

ಕುಮಾರಧಾರಿಕಾವಾಸಃ ಶಕ್ತ್ಯಾಯುಧವರಪ್ರದಃ ।
ಶಂಖಾಭಯಪ್ರದೋ ಭವ್ಯಃ ಶಂಭುಸೇವಿತಪಾದುಕಃ ॥ ೯ ॥

ವಾಂಛಿತಂ ವರದೋ ದದ್ಯಾದ್ ವೇಂಕಟಾದ್ರಿಶಿಖಾಮಣಿಃ ।
ಶ್ವೇತಭೂಧರರೂಪೋಽಯಂ ದಿವಾರಾತ್ರಂ ಸದಾ ಹರಿಃ ॥ ೧೦ ॥

ಮಾಂ ರಕ್ಷ ಕಮಲಾನಾಥ ವೈಕುಂಠಾಧಿಪ ಮಾಧವ ।
ಪುಂಡರೀಕಾಕ್ಷ ಮಾಂ ನಿತ್ಯಂ ಸರ್ವಥಾ ಪಾಹಿ ವಾಮನ ॥ ೧೧ ॥

ಪಂಜರಂ ಶ್ರೀನಿವಾಸಸ್ಯ ತ್ರಿಸಂಧ್ಯಂ ಭಕ್ತಿಮಾನ್ ಪಠೇತ್ ।
ತಸ್ಮಿನ್ ವೇಂಕಟನಾಥಸ್ಯ ಸಂಪೂರ್ಣಾ ಸ್ಯಾನ್ಮಹಾದಯಾ ॥ ೧೨ ॥

ಧನಧಾನ್ಯಪ್ರದಂ ಪುತ್ರಸಂತತೇಃ ಕಾರಣಂ ಮಹತ್ ।
ಪಂಜರಂ ವೇಂಕಟೇಶಸ್ಯ ಸರ್ವೈರ್ಮುನಿಭಿರಾದೃತಮ್ ॥ ೧೩ ॥

ಆಪತ್ಕಾಲೇ ಜಪೇದ್ಯಸ್ತು ಶಾಂತಿಮಾಯಾಂತ್ಯುಪದ್ರವಾಃ ।
ರೋಗಾಃ ಪ್ರಶಮಮಾಯಾಂತಿ ತ್ರಿರ್ಜಪನ್ ಭಾನುವಾಸರೇ ।

ತಸ್ಯ ಶ್ರೀರ್ವೃದ್ಧಿಮಾಯಾತಿ ವೇಂಕಟೇಶಪ್ರಸಾದತಃ ॥ ೧೪ ॥

**ಇತ್ಯಾಗ್ನೇಯಪುರಾಣೇ ವೇಂಕಟಗಿರಿಮಾಹಾತ್ಮ್ಯೇ ವೇಂಕಟೇಶಪಂಜರಸ್ತೋತ್ರಮ್ ॥**

x x x x

# ಭಾಗವತದ 'ಬಾಲರಕ್ಷಾಸ್ತೋತ್ರ'

## ಸ್ಥೂಲಮಾಹಿತಿ

ಶಿಶುರೂಪದ ಕೃಷ್ಣನು ಪೂತನೆಯನ್ನು ಸಂಹರಿಸಿದ ಸಂದರ್ಭದಲ್ಲಿ ಅಂತಹ ದುಷ್ಟ ಶಕ್ತಿಗಳ ಸಂಪರ್ಕದಿಂದ ಮುಂದೆ ಮಗುವಿಗೇನೂ ಹಾನಿ ಆಗಬಾರದೆಂದು ಗೋಪಿಯರೆಲ್ಲ ಪುಟ್ಟ ಶ್ರೀಕೃಷ್ಣನ ಅಂಗಾಂಗಗಳಲ್ಲಿ ಅಭಿಮಂತ್ರಿಸಲು ಬಳಸಿಕೊಂಡ ಸ್ತೋತ್ರವೇ 'ಬಾಲರಕ್ಷಾ ಸ್ತೋತ್ರ'. ಭಾಗವತದಲ್ಲಿ (10-7-23....30) ಪ್ರಸ್ತುತವಾಗುವ ಎಂಟು ಶ್ಲೋಕಗಳ ಈ ಸ್ತೋತ್ರದಲ್ಲಿ ಭಗವಂತನ ಅಜ, ಅಣಿಮಾನ್ — ಮುಂತಾದ ನಾಮಗಳನ್ನು ಉಲ್ಲೇಖಿಸಿ ಪಾದ, ಮೊಣಕಾಲು, ತೊಡೆ, ಸೊಂಟ, ಹೊಟ್ಟೆ, ಹೃದಯ, ಎದೆ, ಕಂಠ, ಭುಜ, ಮೂಲೆ ಹಾಗೂ ತಲೆ ಇವಿಷ್ಟು ಅಂಗಗಳನ್ನು ರಕ್ಷಿಸಲು ಕೇಳಿಕೊಳ್ಳಲಾಗಿದೆ. ಎದುರು ಹಿಂದೆ ಮುಂತಾದ ಬೇರ ಬೇರೆ ದೇಶಗಳಲ್ಲಿ ಆಟ ಆಡುವುದೇ ಮುಂತಾದ ಬೇರೆ ಬೇರೆ ಅವಸ್ಥೆಗಳಲ್ಲಿ ರಕ್ಷಿಸಲು ಭಿನ್ನವಿಸಿಕೊಳ್ಳಲಾಗಿದೆ. ಶಿಶುಗಳಿಗೆ ಹಾನಿ ಮಾಡಬಹುದಾದ ಇಪ್ಪತ್ತಕ್ಕಿಂತಲೂ ಅಧಿಕ ದುಷ್ಟಶಕ್ತಿಗಳನ್ನು ಉಲ್ಲೇಖಿಸಿ, ಶ್ರೀಹರಿಯ ನಾಮಸ್ಮರಣೆ ಮಾತ್ರದಿಂದ ಅವೆಲ್ಲ ಹಿಂಜರಿಯುವಂತಾಗಲೆಂದು ಹಾರೈಸಲಾಗಿದೆ.

ಇದರಲ್ಲಿ ಉಲ್ಲೇಖಿಸಿರುವ ಇಪ್ಪತ್ತೊಂಭತ್ತು ಭಗವನ್ನಾಮಗಳಲ್ಲಿ 'ಪೃಶ್ನಿಗರ್ಭ' ಎಂಬುದೂ ಒಂದು. ಸ್ವಾಯಂಭುವ ಮನ್ವಂತರದಲ್ಲಿ ಅದಿತಿ 'ಪೃಶ್ನಿ' ಆಗಿದ್ದಾಗ, ಕಶ್ಯಪ 'ಸುತಪಸ್' ಎನಿಸಿದ್ದಾಗ, ತಾನು 'ಪೃಶ್ನಿಗರ್ಭ' ನಾಮದಿಂದ ಅವರ ಪುತ್ರನಾಗಿ ಅವತರಿಸಿರುವುದನ್ನು ಶ್ರೀಕೃಷ್ಣ ವಸುದೇವ ದೇವಕಿಯರಲ್ಲಿ ತಿಳಿಸಿರುವನು. [ಭಾಗ. 10-4-32....41] ಶ್ರೀಕೃಷ್ಣ ಅರ್ಜುನನಿಗೆ 'ಪೃಶ್ನಿ' ಎನಿಸುವ ಅನ್ನ, ವೇದ, ಜಲ ಹಾಗೂ ಅಮೃತ ಇವು ಯಾವಾಗಲೂ ತನ್ನ ಗರ್ಭದಲ್ಲಿ ಇರುವುದರಿಂದ ತಾನು 'ಪೃಶ್ನಿಗರ್ಭ' ಎನಿಸಿರುವೆನೆಂದು ತಿಳಿಸಿ ಭಾವಿಗೆ ಬಿದ್ದಿದ್ದ 'ತ್ರಿತ' ಋಷಿಯು ತನ್ನ 'ಪೃಶ್ನಿಗರ್ಭ' ಎಂಬ ನಾಮದ ಸಂಕೀರ್ತನೆಯಿಂದಾಗಿ, ಬಾವಿಯಿಂದ ಹೊರಬಂದಿರುವನೆಂದು ನಿರೂಪಿಸಿರುವುದನ್ನು ಮಹಾಭಾರತ [ಶಾಂತಿ 341-45, 46, 47] ಉಲ್ಲೇಖಿಸಿದೆ.

X X X X

ಭಾಗವತದಲ್ಲಿ ಪ್ರಸ್ತುತವಾಗಿರುವ

# ಬಾಲರಕ್ಷಾ ಸ್ತೋತ್ರ

**[ಭೂತಪ್ರೇತಪಿಶಾಚಾದಿದುಷ್ಟಬಾಧಾನಿವೃತ್ತಯೇ ।**
**ಬಾಲರಕ್ಷಾಂ ಕರಿಷ್ಯಾಮಿ ಹರಿನಾಮಾನುಕೀರ್ತನಾತ್]**

ಅವ್ಯಾದಜೋಽಂಘ್ರಿಮಣಿಮಾಂಸ್ತವ ಜಾನ್ವಥೋರೂ
ಯಜ್ಞೋಽಚ್ಯುತಃ ಕಟಿತಟಂ ಜಠರಂ ಹಯಾಸ್ಯಃ ।
ಹೃತ್ ಕೇಶವಸ್ತ್ವದುರ ಈಶ ಇನಸ್ತು ಕಂಠಂ
ವಿಷ್ಣುರ್ಭುಜಂ ಮುಖಮುರುಕ್ರಮ ಈಶ್ವರಃ ಕಮ್ ॥ ೧ ॥

ಚಕ್ರ್ಯಗ್ರತಃ ಸಹಗದೋ ಹರಿರಸ್ತು ಪಶ್ಚಾತ್
ತ್ವತ್ಪಾರ್ಶ್ವಯೋರ್ಧನುರಸೀ ಮಧುಹಾಽಜನಶ್ಚ ।
ಕೋಣೇಷು ಶಂಖ ಉರುಗಾಯ ಉಪರ್ಯುಪೇಂದ್ರಃ ।
ತಾರ್ಕ್ಷ್ಯಃ ಕ್ಷಿತೌ ಹಲಧರಃ ಪುರುಷಃ ಸಮಂತಾತ್ ॥ ೨ ॥

ಇಂದ್ರಿಯಾಣಿ ಹೃಷೀಕೇಶಃ ಪ್ರಾಣಾನ್ ನಾರಾಯಣೋಽವತು ।
ಶ್ವೇತದ್ವೀಪಪತಿಶ್ಚಿತ್ತಂ ಮನೋ ಯೋಗೇಶ್ವರೋಽವತು ॥ ೩ ॥

ಪೃಶ್ನಿಗರ್ಭಸ್ತು ತೇ ಬುದ್ಧಿಮಾತ್ಮಾನಂ ಭಗವಾನ್ ಪರಃ ।
ಕ್ರೀಡಂತಂ ಪಾತು ಗೋವಿಂದಃ ಶಯಾನಂ ಪಾತು ಮಾಧವಃ ॥
ವ್ರಜಂತಮವ್ಯಾದ್ ವೈಕುಂಠ ಆಸೀನಂ ತ್ವಾಂ ಶ್ರಿಯಃಪತಿಃ ।
ಭುಂಜಾನಂ ಯಜ್ಞಭುಕ್ ಪಾತು ಸರ್ವಗ್ರಹಭಯಂಕರಃ ॥ ೪ ॥

ಡಾಕಿನ್ಯೋ ಯಾತುಧಾನ್ಯಶ್ಚ ಕೂಶ್ಮಾಂಡಾ ಯೇಽರ್ಭಕಗ್ರಹಾಃ ।
ಭೂತಪ್ರೇತಪಿಶಾಚಾಶ್ಚ ಯಕ್ಷರಕ್ಷೋವಿನಾಯಕಾಃ ॥ ೫ ॥

ಕೋಟರಾರೇವತೀಜ್ಯೇಷ್ಠಾ ಪೂತನಾಮಾತೃಕಾದಯಃ ।
ಉನ್ಮಾದಾ ಯೇ ಹ್ಯಪಸ್ಮಾರಾ ದೇಹಪ್ರಾಣೇಂದ್ರಿಯದ್ರುಹಃ ॥
ಸ್ವಪ್ನದೃಷ್ಟಾ ಮಹೋತ್ಪಾತಾ ವೃದ್ಧಬಾಲಗ್ರಹಾಶ್ಚ ಯೇ ।
ಸರ್ವೇ ನಶ್ಯಂತು ಯೇ ವಿಷ್ಣೋರ್ನಾಮಗ್ರಹಣಭೀರವಃ ॥ ೬ ॥

**ಇತಿ ಶ್ರೀಮದ್ಭಾಗವತೇ ಗೋಪೀಕೃತಬಾಲರಕ್ಷಾಸ್ತೋತ್ರಮ್**

### ಶ್ರೀ ಪದ್ಮಪುರಾಣೋಕ್ತಂ

# ಶ್ರೀರಾಮರಕ್ಷಾಸ್ತೋತ್ರಮ್

### ಸ್ಥೂಲ ಮಾಹಿತಿ

ಪದ್ಮಪುರಾಣ ಪ್ರಸ್ತುತಪಡಿಸುವ ಶ್ರೀರಾಮರಕ್ಷಾಸ್ತೋತ್ರ ೧೧ ಪದ್ಯಗಳನ್ನೊಳಗೊಂಡ ಚಿಕ್ಕ ಕವಚಸ್ತೋತ್ರ. ಪ್ರಾರಂಭದ ಒಂದು ಪದ್ಯದಲ್ಲಿ ಸ್ತೋತ್ರವನ್ನು ಪಠಿಸುವಾಗ ಧ್ಯಾನಿಸಬೇಕಾದ ಶ್ರೀರಾಮನ ಸ್ವರೂಪವನ್ನು ವರ್ಣಿಸಿದರೆ, ಕೊನೆಯ ನಾಲ್ಕು ಪದ್ಯಗಳಲ್ಲಿ ಈ ಕವಚಸ್ತೋತ್ರದ 'ಫಲಶ್ರುತಿ' ನಿರೂಪಿತವಾಗಿದ್ದು ಐದು ಪದ್ಯಗಳಲ್ಲಷ್ಟೇ [೨ರಿಂದ ೯] ಕವಚದಂತೆ ಸುತ್ತ ಬೇರೆ ಬೇರೆ ಅಂಗಗಳಲ್ಲಿ ಇದ್ದುಕೊಂಡು ಸಂರಕ್ಷಿಸಲು ಶ್ರೀರಾಮಚಂದ್ರನಲ್ಲಿ ಪ್ರಾರ್ಥಿಸಲಾಗಿದೆ. ಶ್ರೀರಾಮನ ಮೂಲರೂಪಕ್ಕೆ ಸಂಬಂಧಿಸುವ ವಿಶ್ವರಕ್ಷಕ, ವಿಶ್ವರೂಪಧೃಕ್, ವಿಶ್ವಾತ್ಮಾ, ಕಾಮದಃ, ಅನಂತ, ಕೇಶವ ಮುಂತಾದ ನಾಮಗಳ ಜೊತೆಗೆ ರಾಮಾವತಾರಕ್ಕೇ ಸಂಬಂಧಿಸುವ ಮಖತ್ರಾತಾ, ದಾಶರಥಿ, ಸೀತಾಪತಿ, ರಾಘವ ಮುಂತಾದ ನಾಮಗಳ ಉಲ್ಲೇಖವೂ ಬಂದಿದೆ. ಕಾಲಕೋಟಿ-ದುರಾಸದಃ (೪ನೇ ಪದ್ಯದಲ್ಲಿ) ಎಂಬುದಕ್ಕೆ ಕಾಲದ ಗಡುವಿಗೆ ಒಳಗಾಗದವನು, ಶಾಶ್ವತ ಎಂದರ್ಥ.

"ವಸಿಷ್ಠೇನ ಇಂದಂ ಪ್ರೋಕ್ತಂ...." ಇತ್ಯಾದಿಯಾಗಿ ಒಂದುವರೆ ಪದ್ಯದಲ್ಲಿ ವಸಿಷ್ಠನಿಂದ ಶ್ರೀ ವಿಷ್ಣುವಿನೆದುರು ನಿವೇದನೆ, ವಿಷ್ಣುವಿನಿಂದ ಚತುರ್ಮುಖನಿಗೆ, ಚತುರ್ಮುಖನಿಂದ ನಾರದರಿಗೆ. ನಾರದರಿಂದ ಭೂಲೋಕದ ಸಜ್ಜನರಿಗೆ—ಹೀಗೆ ಈ ಸ್ತೋತ್ರದ ಉಪದೇಶ ಪರಂಪರೆಯನ್ನು ತಿಳಿಸಲಾಗಿದೆ.

X X X X

# ಅಥ ಶ್ರೀರಾಮರಕ್ಷಾಸ್ತೋತ್ರಮ್

ಅಸ್ಯ ಶ್ರೀರಾಮರಕ್ಷಾಸ್ತೋತ್ರಸ್ಯ ಶ್ರೀ ಮಹರ್ಷಿರ್ವಿಶ್ವಾಮಿತ್ರ ಋಷಿಃ ।
ಅನುಷ್ಟುಪ್ ಛಂದಃ । ಶ್ರೀರಾಮಚಂದ್ರೋ ದೇವತಾ ।
ಶ್ರೀರಾಮಪ್ರೀತ್ಯರ್ಥೇ ಜಪೇ ವಿನಿಯೋಗಃ ।

ಅತಸೀಪುಷ್ಪಸಂಕಾಶಂ ಪೀತವಾಸಸಮಚ್ಯುತಮ್ ।
ಧ್ಯಾತ್ವಾ ವೈ ಪುಂಡರೀಕಾಕ್ಷಂ ಶ್ರೀರಾಮಂ ವಿಷ್ಣುಮವ್ಯಯಮ್ ॥ ೧ ॥

ಪಾತು ವೋ ಹೃದಯಂ ರಾಮಃ ಶ್ರೀಕಂಠಃ ಕಂಠಮೇವ ಚ ।
ನಾಭಿಂ ತ್ರಾತು ಮಖತ್ರಾತಾ ಕಟಿಂ ಮೇ ವಿಶ್ವರಕ್ಷಕಃ ॥ ೨ ॥

ಕರೌ ದಾಶರಥಿಃ ಪಾತು ಪಾದೌ ಮೇ ವಿಶ್ವರೂಪಧೃಕ್ ।
ಚಕ್ಷುಷೀ ಪಾತು ವೈ ದೇವಃ ಸೀತಾಪತಿರನುತ್ತಮಃ ॥ ೩ ॥

ಶಿಖಾಂ ಮೇ ಪಾತು ವಿಶ್ವಾತ್ಮಾ ಕರ್ಣೌ ಮೇ ಪಾತು ಕಾಮದಃ ।
ಪಾರ್ಶ್ವಯೋಸ್ತು ಸುರತ್ರಾತಾ ಕಾಲಕೋಟಿದುರಾಸದಃ ॥ ೪ ॥

ಅನಂತಃ ಸರ್ವದಾ ಪಾತು ಶರೀರಂ ವಿಶ್ವನಾಯಕಃ ।
ಜಿಹ್ವಾಂ ಮೇ ಪಾತು ಪಾಪಘ್ನೋ ಲೋಕಶಿಕ್ಷಾಪ್ರವರ್ತಕಃ ॥ ೫ ॥

ರಾಘವಃ ಪಾತು ಮೇ ದಂತಾನ್ ಕೇಶಾನ್ ರಕ್ಷತು ಕೇಶವಃ ।
ಸಕ್ಥಿನೀ ಪಾತು ಮೇ ದತ್ತವಿಜಯೋ ನಾಮ ವಿಶ್ವಸೃಕ್ ॥ ೬ ॥

ಏತಾಂ ರಾಮಬಲೋಪೇತಾಂ ರಕ್ಷಾಂ ವೈ ಪುರುಷಃ ಪಠೇತ್ ।
ಸ ಚಿರಾಯುಃ ಸುಖೀ ವಿದ್ವಾನ್ ಲಭತೇ ದಿವ್ಯಸಂಪದಮ್ ॥ ೭ ॥

ರಕ್ಷಾಂ ಕರೋತಿ ಭೂತೇಭ್ಯಃ ಸದಾ ರಕ್ಷಾ ತು ವೈಷ್ಣವೀ ।
ರಾಮೇತಿ ರಾಮಭದ್ರೇತಿ ರಾಮಚಂದ್ರೇತಿ ಯಃ ಸ್ಮರೇತ್ ॥ ೮ ॥

ವಿಮುಕ್ತಃ ಸ ನರಃ ಪಾಪಾತ್ ಮುಕ್ತಿಂ ಪ್ರಾಪ್ನೋತಿ ಶಾಶ್ವತೀಮ್ ।
ವಸಿಷ್ಠೇನ ಇದಂ ಪ್ರೋಕ್ತಂ ಗುರವೇ ವಿಷ್ಣುರೂಪಿಣೇ ॥ ೯ ॥

ತತೋ ಮೇ ಬ್ರಹ್ಮಣಃ ಪ್ರಾಪ್ತಂ ಮಯೋಕ್ತಂ ನಾರದಂ ಪ್ರತಿ ।
ನಾರದೇನ ತು ಭೂಲೋಕೇ ಪ್ರಾಪಿತಂ ಸುಜನೇಷ್ವಿಹ ॥ ೧೦ ॥

ಸಂಪ್ರಾಪ್ತ್ವ ವಾಽಥ ಗೃಹೇ ವಾಽಪಿ ಮಾರ್ಗೇ ಗಚ್ಛತಿ ಏವ ವಾ ।
ಯೇ ಪಠಂತಿ ನರಶ್ರೇಷ್ಠಾಸ್ತೇ ಜ್ಞೇಯಾಃ ಪುಣ್ಯಭಾಗಿನಃ ॥ ೧೧ ॥

**ಇತಿ ಪದ್ಮಪುರಾಣೋಕ್ತಂ ಶ್ರೀರಾಮರಕ್ಷಾಸ್ತೋತ್ರಮ್ ।**

X X X X

# ಶ್ರೀನೃಸಿಂಹಕವಚಮ್

## ಸ್ಥೂಲಮಾಹಿತಿ

ಭಕ್ತಪ್ರಹ್ಲಾದನಿಂದ ಹೇಳಲ್ಪಟ್ಟದ್ದೆಂದು ಉಲ್ಲೇಖಗೊಂಡಿರುವ ನೃಸಿಂಹಕವಚ ಯಾವ ಆಕರದಲ್ಲಿ ನಿರೂಪಿತವಾಗಿದೆ ಎಂಬ ಮಾಹಿತಿ ಸ್ತೋತ್ರಪುಸ್ತಕಗಳಲ್ಲಿ ದೊರಕುವುದಿಲ್ಲ. ಆದರೆ ಸಾಧಕರು ವಿಶೇಷವಾಗಿ ಪಠಿಸುವ ಸ್ತೋತ್ರಗಳಲ್ಲಿ ಇದು ಒಂದಾಗಿ ಪರಿಗಣಿಸಲ್ಪಟ್ಟಿದೆ. ೩೧ ಶ್ಲೋಕಗಳ ವ್ಯಾಪ್ತಿಯನ್ನು ಹೊಂದಿರುವ ಈ ಸ್ತೋತ್ರದ ಕೊನೆಯ ಹತ್ತು ಶ್ಲೋಕಗಳು [೨೧ರಿಂದ ೩೦] 'ಫಲಶ್ರುತಿ'ಯ ರೂಪದಲ್ಲಿವೆ. [ಸಾಧಕರಿಗೆ ಫಲಶ್ರುತಿ ಅಷ್ಟೊಂದು ಉಪಯುಕ್ತವೆನಿಸದೆಂದು ಅದನ್ನು ಇಲ್ಲಿ ಕೈಬಿಡಲಾಗಿದೆ.] ಈ ಕವಚವನ್ನು ಪಠಿಸುವಾಗ ಧ್ಯಾನಿಸಬೇಕಾದ ನರಸಿಂಹನ ರೂಪದ ವರ್ಣನೆಯನು ಪ್ರಾರಂಭದ ಏಳು ಶ್ಲೋಕಗಳಲ್ಲಿ ನಡೆಸಿ, 'ಸ್ವಹೃತ್ಕಮಲಸಂವಾಸಂ ಕೃತ್ವಾ ತು ಕವಚಂ ಪಠೇತ್' ಉಪಾಸಕನು ತನ್ನ ಹೃದಯಕಮಲದಲ್ಲಿ ಇಂತಹ ಶ್ರೀನರಸಿಂಹನು ನೆಲೆಸಿರುವನೆಂದು ಭಾವಿಸಿ ನೃಸಿಂಹಕವಚವನ್ನು ಪಠಿಸಬೇಕೆಂದು ವಿಧಿಸಲಾಗಿದೆ.

ಹನ್ನೆರಡು ಶ್ಲೋಕಗಳಲ್ಲಿ [೮ರಿಂದ ೧೯] ನೃಸಿಂಹನು ದೇಹದ ಬೇರೆ ಬೇರೆ ಅಂಗವನ್ನು ರಕ್ಷಿಸುವಂತೆಯೂ, ಪೂರ್ವ ಮುಂತಾದ ದಿಕ್ಕುಗಳಲ್ಲಿ ರಕ್ಷಣೆಯನ್ನು ನೀಡುವಂತೆಯೂ ಪ್ರಾರ್ಥಿಸಲಾಗಿದೆ.

ನರಸಿಂಹಾವತಾರದ ಅಸಾಧಾರಣ ಧರ್ಮಗಳನ್ನು ಸೂಚಿಸುವ 'ಸ್ತಂಭವಾಸ' 'ಸೋಮಸೂರ್ಯಾಗ್ನಿಲೋಚನ' 'ಸಿಂಹನಾಶ' 'ಪ್ರಹ್ಲಾದವಂದಿತ' ಮುಂತಾದ ಹೆಸರುಗಳಿಂದ ನರಸಿಂಹನನ್ನು ಉಲ್ಲೇಖಿಸಲಾಗಿದೆ.

ಕೊನೆಯ ೩೧ನೇ ಶ್ಲೋಕದಲ್ಲಿ ನೃಸಿಂಹಾವತಾರದ ಲೀಲೆಯನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಲಾಗಿದೆ. ನೃಸಿಂಹನು ತಾನು ಗರ್ಜಿಸುತ್ತಿರುವನು. ಅವನ ಗರ್ಜನೆ ಪ್ರತಿಧ್ವನಿಯಾಗಿ ಮಾರ್ದನಿಸುತ್ತಿರುವುದು. ಅವನು ತನ್ನ ಭುಜಗಳನ್ನು ನೆಲದ ಮೇಲೆ ಮತ್ತೆ ಮತ್ತೆ ಅಪ್ಪಳಿಸುತ್ತಿರುವನು. ಆ ಕಡೆ ಈ ಕಡೆ ಓಡುವ ರಕ್ಕಸರನ್ನೆಲ್ಲ ತನ್ನೆಡೆಗೆ ಎಳೆದು ತರುತ್ತಿರುವನು. ಮಿಂಚಿನಂತೆ ಹೊಳೆಯುತ್ತಿರುವನು. ಕಣ್ಣುಗಳಿಗೆ ಕೋರೈಸುವ ಕಿರಣಗಳಿಂದ ಶತ್ರುಗಳನ್ನು ಸುಡುವನು. ದೈತ್ಯನಾದ ಹಿರಣ್ಯಕಶಿಪುವನ್ನು ಒಮ್ಮೆ ಆಕಾಶದ ಮೇಲೆ, ಮತ್ತೊಮ್ಮೆ ಭೂಮಿಯ ಮೇಲೆ ಎಸೆಯುತ್ತಿರುವನು. ಅವನನ್ನು ನೆಕ್ಕುತ್ತಿರುವನು. ಗಟ್ಟಿಯಾಗಿ ಕಿರುಚುತ್ತಿರುವ ಹಿರಣ್ಯಕಶಿಪು ಮತ್ತೆ ಮತ್ತೆ ಸಿಟ್ಟಿಗೊಳಗಾಗುವಂತೆ ಪೀಡಿಸುತ್ತಿರುವನು. ಯಾವಾಗಲೂ, ದಿಕ್ಕುದಿಕ್ಕುಗಳಲ್ಲೂ ಭಕ್ತರನ್ನು ಚೆನ್ನಾಗಿ ಧರಿಸುವನು, ಪೋಷಿಸುವನು. ಸಂಹಾರ ಕಾಲದಲ್ಲಿ ಸಂಹರಿಸುವನು. ದಿಟ್ಟಿಸಿ ನೋಡುತ್ತಿರುವನು. ತನ್ನ ನೂರಾರು ಕೈಗಳಿಂದ ತಿರುಗಿಸುತ್ತಿರುವನು. ಅಂತಹ ಅಲೌಕಿಕ ರೂಪದ ನರಸಿಂಹನನ್ನು ನಮಿಸುವೆನು ಎಂದು ಉಪಸಂಹರಿಸಲಾಗಿದೆ.



# ಶ್ರೀ ನೃಸಿಂಹಕವಚವಮ್

ನೃಸಿಂಹಕವಚಂ ವಕ್ಷ್ಯೇ ಪ್ರಹ್ಲಾದೇನೋದಿತಂ ಪುರಾ ।
ಸರ್ವರಕ್ಷಾಕರಂ ಪುಣ್ಯಂ ಸರ್ವೋಪದ್ರವನಾಶನಮ್ ॥ ೧ ॥

ಸರ್ವಸಂಪತ್ಕರಂ ಚೈವ ಸ್ವರ್ಗಮೋಕ್ಷಪ್ರದಾಯಕಮ್ ।
ಧ್ಯಾತ್ವಾ ನೃಸಿಂಹಂ ದೇವೇಶಂ ಹೇಮಸಿಂಹಾಸನಸ್ಥಿತಮ್ ॥ ೨ ॥

ವಿವೃತಾಸ್ಯಂ ತ್ರಿನಯನಂ ಶರದಿಂದುಸಮಪ್ರಭಮ್ ।
ಲಕ್ಷ್ಮ್ಯಾಲಿಂಗಿತವಾಮಾಂಗಂ ವಿಭೂತಿಭಿರುಪಾಶ್ರಿತಮ್ ॥ ೩ ॥

ಚತುರ್ಭುಜಂ ಕೋಮಲಾಂಗಂ ಸ್ವರ್ಣಕುಂಡಲಶೋಭಿತಮ್ ।
ಉರೋಜಶೋಭಿತೋರಸ್ಕಂ ರತ್ನಕೇಯೂರಮುದ್ರಿತಮ್ ॥ ೪ ॥

ತಪ್ತಕಾಂಚನಸಂಕಾಶಂ ಪೀತನಿರ್ಮಲವಾಸಸಮ್ ।
ಇಂದ್ರಾದಿಸುರಮೌಲಿಸ್ಥಸ್ಫುರನ್ಮಾಣಿಕ್ಯದೀಪ್ತಿಭಿಃ ॥ ೫ ॥

ವಿರಾಜಿತಪದದ್ವಂದ್ವಂ ಶಂಖಚಕ್ರಾದಿಹೇತಿಭಿಃ ।
ಗರುತ್ಮತಾ ಚ ವಿನಯಾತ್ ಸ್ತೂಯಮಾನಂ ಮುದಾಽನ್ವಿತಮ್ ॥ ೬ ॥

ಸ್ವಹೃತ್ಕಮಲಸಂವಾಸಂ ಕೃತ್ವಾ ತು ಕವಚಂ ಪಠೇತ್ ।
ನೃಸಿಂಹೋ ಮೇ ಶಿರಃ ಪಾತು ಲೋಕರಕ್ಷಾತ್ಮಸಂಭವಃ ॥ ೭ ॥

ಸರ್ವಗೋಽಪಿ ಸ್ತಂಭವಾಸಃ ಫಾಲಂ ಮೇ ರಕ್ಷತು ಧ್ವನೇಃ ।
ನೃಸಿಂಹೋ ಮೇ ದೃಶೌ ಪಾತು ಸೋಮಸೂರ್ಯಾಗ್ನಿಲೋಚನಃ ॥ ೮ ॥

ಶ್ರುತೀ ಮೇ ಪಾತು ನೃಹರಿರ್ಮುನಿವರ್ಯಸ್ತುತಿಪ್ರಿಯಃ ।
ನಾಸಾಂ ಮೇ ಸಿಂಹನಾಸಸ್ತು ಮುಖಂ ಲಕ್ಷ್ಮೀಮುಖಪ್ರಿಯಃ ॥ ೯ ॥

ಸರ್ವವಿದ್ಯಾಧಿಪಃ ಪಾತು ನೃಸಿಂಹೋ ರಸನಾಂ ಮಮ ।
ವಕ್ತ್ರಂ ಪಾತ್ವಿಂದುವದನಃ ಸದಾ ಪ್ರಹ್ಲಾದವಂದಿತಃ ॥ ೧೦ ॥

ನೃಸಿಂಹಃ ಪಾತು ಮೇ ಕಂಠಂ ಸ್ಕಂಧೌ ಭೂಭರಣಾಂತಕೃತ್ ।
ದಿವ್ಯಾಸ್ತ್ರಶೋಭಿತಭುಜೋ ನೃಸಿಂಹಃ ಪಾತು ಮೇ ಭುಜೌ ॥ ೧೧ ॥

ಕರೌ ಮೇ ದೇವವರದೋ ನೃಸಿಂಹಃ ಪಾತು ಸರ್ವತಃ ।
ಹೃದಯಂ ಯೋಗಿಸಾಧ್ಯಶ್ಚ ನಿವಾಸಂ ಪಾತು ಮೇ ಹರಿಃ ॥ ೧೨ ॥

ಮಧ್ಯಂ ಪಾತು ಹಿರಣ್ಯಾಕ್ಷವಕ್ಷಃಕುಕ್ಷಿವಿದಾರಣಃ ।
ನಾಭಿಂ ಮೇ ಪಾತು ನೃಹರಿಃ ಸ್ವನಾಭಿಬ್ರಹ್ಮಸಂಸ್ತುತಃ ॥ ೧೩ ॥

ಬ್ರಹ್ಮಾಂಡಕೋಟಯಃ ಕಟ್ಯಾಂ ಯಸ್ಯಾಸೌ ಪಾತು ಮೇ ಕಟಿಮ್ ।
ಗುಹ್ಯಂ ಮೇ ಪಾತು ಗುಹ್ಯಾನಾಂ ಮಂತ್ರಾಣಾಂ ಗುಹ್ಯರೂಪಧೃಕ್ ॥ ೧೪ ॥

ಊರೂ ಮನೋಭವಃ ಪಾತು ಜಾನುನೀ ನರರೂಪಧೃಕ್ ।
ಜಂಘೇ ಪಾತು ಧರಾಭಾರಹರ್ತಾ ಯೋಽಸೌ ನೃಕೇಸರೀ ॥ ೧೫ ॥

ಸುರರಾಜ್ಯಪ್ರದಃ ಪಾತು ಪಾದೌ ಮೇ ನೃಹರೀಶ್ವರಃ ।
ಸಹಸ್ರಶೀರ್ಷಾ ಪುರುಷಃ ಪಾತು ಮೇ ಸರ್ವಶಸ್ತನುಮ್ ॥ ೧೬ ॥

ಮಹೋಗ್ರಃ ಪೂರ್ವತಃ ಪಾತು ಮಹಾವೀರಾಗ್ರಜೋಽಗ್ನಿತಃ ।
ಮಹಾವಿಷ್ಣುರ್ದಕ್ಷಿಣೇ ತು ಮಹಾಜ್ವಾಲಸ್ತು ನಿರ್ಋತೌ ॥ ೧೭ ॥

ಪಶ್ಚಿಮೇ ಪಾತು ಸರ್ವೇಶೋ ದಿಶಿ ಮೇ ಸರ್ವತೋಮುಖಃ ।
ನೃಸಿಂಹಃ ಪಾತು ವಾಯವ್ಯಾಂ ಸೌಮ್ಯಂ ಭೂಷಣವಿಗ್ರಹಃ ॥ ೧೮ ॥

ಐಶಾನ್ಯಾಂ ಪಾತು ಭದ್ರೋ ಮೇ ಸರ್ವಮಂಗಲದಾಯಕಃ ।
ಸಂಸಾರಭಯದಃ ಪಾತು ಮೃತ್ಯೋರ್ಮೃತ್ಯುರ್ನೃಕೇಸರೀ ॥ ೧೯ ॥

ಇದಂ ನೃಸಿಂಹಕವಚಂ ಪ್ರಹ್ಲಾದಮುಖಮಂಡಿತಮ್ ।
ಭಕ್ತಿಮಾನ್ ಯಃ ಪಠೇನ್ನಿತ್ಯಂ ಸರ್ವಪಾಪೈಃ ಪ್ರಮುಚ್ಯತೇ ॥ ೨೦ ॥

................ . ............... ........ .. . ............. .......

ಗರ್ಜಂತಂ ಗರ್ಜಯಂತಂ ನಿಜಭುಜಪಟಲಂ ಸ್ಫೋಟಯಂತಂ ಹರಂತಂ ।
ದೀಪ್ಯಂತಂ ತಾಪಯಂತಂ ದಿವಿ ಭುವಿ ದಿತಿಜಂ ಕ್ಷೇಪಯಂತಂ ರಸಂತಮ್ ।

ಕ್ರಂದಂತಂ ರೋಷಯಂತಂ ದಿಶಿ ದಿಶಿ ಸತತಂ ಸಂಭರಂತಂ ಹರಂತಂ
ವೀಕ್ಷಂತಂ ಘೂರ್ಣಯಂತಂ ಕರನಿಕರಶತೈರ್ದಿವ್ಯಸಿಂಹಂ ನಮಾಮಿ ॥ ೩೧ ॥

**ಇತಿ ಪ್ರಹ್ಲಾದಪ್ರೋಕ್ತಂ ಶ್ರೀನೃಸಿಂಹಕವಚಮ್ ।**



### ಶ್ರೀ ಬುಧಕೌಶಿಕಸಂಗೃಹೀತಂ

# ಶ್ರೀ ರಾಮರಕ್ಷಾಸ್ತೋತ್ರಮ್

## ಸ್ಥೂಲಮಾಹಿತಿ

ಸ್ತೋತ್ರ ಸಂಗ್ರಾಹಕ ಪುಸ್ತಕಗಳಲ್ಲಿ ಆಕರಗ್ರಂಥದ ಉಲ್ಲೇಖವಿಲ್ಲದೆ,'ಬುಧಕೌಶಿಕ-ಸಂಗೃಹೀತಂ' ಶ್ರೀರಾಮರಕ್ಷಾಸ್ತೋತ್ರಂ ಎಂದಷ್ಟೇ ಉಲ್ಲೇಖಿಸಲ್ಪಟ್ಟಿರುವ ಸ್ತೋತ್ರ ೩೮ ಶ್ಲೋಕಗಳನ್ನೊಳಗೊಂಡಿದೆ. ಆದರೆ ಅದರಲ್ಲಿ ಬೇರೆ ಬೇರೆ ಸ್ತೋತ್ರದ, ಆಕರದ ಪದ್ಯಗಳೂ ['ಕೂಜಂತಂ ರಾಮ ರಾಮೇತಿ....' 'ರಾಮ ರಾಮೇತಿ ರಾಮೇತಿ' 'ಮನೋಜವಂ ಮಾರುತತುಲ್ಯವೇಗಂ..." [ಮಾರುತಿಯ ಕುರಿತು ಹೊರಟದ್ದು] ಸೇರಿಕೊಂಡಿರ್ರುವುದರಿಂದ ಹಾಗೂ ದೀರ್ಘವಾದ 'ಫಲಶ್ರುತಿ'ಯೂ ಸೇರಿಕೊಂಡಿರುವುದರಿಂದ ಸಾಧನಾ ದೃಷ್ಟಿಯಲ್ಲಿ ಅಷ್ಟೊಂದು ಉಪಯುಕ್ತವೆನಿಸದ ಅವನ್ನು ಇಲ್ಲಿ ಪ್ರಕಟಿಸದೆ, ಮೊದಲ ಹತ್ತು ಪದ್ಯಗಳನ್ನಷ್ಟೇ ಪ್ರಕಟಿಸಲಾಗಿದೆ.

ಮೊದಲ ಮೂರು ನಾಲ್ಕು ಶ್ಲೋಕಗಳಲ್ಲಿ ಈ ರಕ್ಷಾಸ್ತೋತ್ರವನ್ನು ಪಠಿಸುವಾಗ ಧ್ಯಾನಿಸಬೇಕಾದ ಶ್ರೀರಾಮಚಂದ್ರನ ರೂಪವನ್ನು ವರ್ಣಿಸಿ, 'ಶಿರೋ ಮೇ ರಾಘವಃ ಪಾತು....' ಎಂಬುದಾಗಿ ಶಿರಸ್ಸಿನಿಂದ ಪ್ರಾರಂಭಿಸಿ, 'ಪಾದೌ ವಿಭೀಷಣಶ್ರೀದಃ ಪಾತು ರಾಮೋಽಖಿಲಂ ವಪುಃ' ಎಂಬುದಾಗಿ ಪಾದದವರೆಗಿನ ಬೇರೆ ಬೇರೆ ಅಂಗಗಳನ್ನು ಉಲ್ಲೇಖಿಸಿ, ಅವುಗಳ ರಕ್ಷಣೆಯನ್ನು ಪ್ರಾರ್ಥಿಸಲಾಗಿದೆ. ರಾಮಾಯಣದಲ್ಲಿ ಬರುವ ದಶರಥನೇ ಮುಂತಾದ ವ್ಯಕ್ತಿಗಳ ಜೊತೆ ಶ್ರೀರಾಮಚಂದ್ರನ ಸಂಬಂಧವು ಸೂಚಿತವಾಗುವಂತೆ 'ದಶರಥಾತ್ಮಜ' 'ಕೌಸಲ್ಯೇಯ' 'ವಿಶ್ವಾಮಿತ್ರಪ್ರಿಯ' 'ಸೌಮಿತ್ರಿವತ್ಸಲ' ಇತ್ಯಾದಿ ಹೆಸರುಗಳಿಂದ ಶ್ರೀರಾಮಚಂದ್ರನನ್ನು ಉಲ್ಲೇಖಿಸಲಾಗಿದೆ. ಸಾಮಾನ್ಯ ದೃಷ್ಟಿಯ ಪ್ರಕಾರ ಪರಶುರಾಮನನ್ನು ದಾಶರಥಿರಾಮನು ಸೋಲಿಸಿರುವುದರಿಂದ 'ದರ್ಶನಭಾಷೆ'ಯನ್ನು ಅವಲಂಬಿಸಿ 'ಜಾಮದಗ್ನ್ಯಜಿತ್' ಪರಶುರಾಮನನ್ನು ಗೆದ್ದವನೆಂದು ಉಲ್ಲೇಖಿಸಲಾಗಿದೆ. ಈ ವಿಶೇಷಣವನ್ನು ಪಠಿಸುವಾಗ ಚತುರ್ಮುಖನ ವರದಂತೆ ಅತುಲ ಎಂಬ ರಾಕ್ಷಸನಿಗೆ ದುರ್ಗತಿ ನೀಡುವುದಕ್ಕಾಗಿ ಶ್ರೀರಾಮಚಂದ್ರ ತನ್ನ ಸ್ವರೂಪವೇ ಆದ ಪರಶುರಾಮನ ವಿರುದ್ಧವಾಗಿ ಕಾದಾಡಿ, ಅವನನ್ನು ಸೋಲಿಸಿದಂತೆ ನಟಿಸಿದನೆಂದು ಶ್ರೀ ಮಧ್ವಾಚಾರ್ಯರು ನಿರ್ಣಯಿಸಿರುವುದನ್ನು ಗಮನದಲ್ಲಿಟ್ಟುಗೊಳ್ಳಬೇಕು.

ಈ ಸ್ತೋತ್ರದ ೧೫ನೇ ಪದ್ಯದಲ್ಲಿ ನಿರೂಪಿಸಿರುವಂತೆ ರುದ್ರನು ಸ್ವಪ್ನದಲ್ಲಿ ಅಜ್ಞಾಪಿಸಿದ ಈ ರಾಮರಕ್ಷಾಸ್ತೋತ್ರವನ್ನು ಬೆಳಿಗ್ಗೆ ಎದ್ದು ಬುಧ ಕೌಶಿಕ 'ಅಪಿಬದ್ಧ'ವನ್ನಾಗಿರಿಸಿರುವನು. ಹೀಗೆ ರುದ್ರನ ಮೂಲಕ ಹೊರಹೊಮ್ಮಿದ ಈ ಸ್ತೋತ್ರ ಹೆಚ್ಚು ಅಧಿಕೃತವೆನಿಸಬಲ್ಲುದು.

# ಶ್ರೀ ರಾಮರಕ್ಷಾಸ್ತೋತ್ರಮ್

ಅಸ್ಯ ಶ್ರೀರಾಮರಕ್ಷಾಸ್ತೋತ್ರಮಂತ್ರಸ್ಯ ಬುಧಕೌಶಿಕ ಋಷಿಃ ।
ಶ್ರೀ ಸೀತಾರಾಮಚಂದ್ರೋ ದೇವತಾ ಅನುಷ್ಟುಪ್ ಛಂದಃ ।
ಶ್ರೀರಾಮಚಂದ್ರಪ್ರೀತ್ಯರ್ಥೇ ರಾಮರಕ್ಷಾಸ್ತೋತ್ರಜಪೇ ವಿನಿಯೋಗಃ ।

ಧ್ಯಾಯೇದಾಜಾನುಬಾಹುಂ ಧೃತಶರಧನುಷಂ ಬದ್ಧಪದ್ಮಾಸನಸ್ಥಂ
ಪೀತಂ ವಾಸೋ ವಸಾನಂ ನವಕಮಲದಲಸ್ಪರ್ಧಿನೇತ್ರಂ ಪ್ರಸನ್ನಮ್ ।
ವಾಮಾಂಕಾರೂಢಸೀತಾಮುಖಕಮಲಮಿಲಲ್ಲೋಚನಂ ನೀರದಾಭಂ
ನಾನಾಲಂಕಾರದೀಪ್ತಂ ದಧತಮುರುಜಟಾಮಂಡಲಂ ರಾಮಚಂದ್ರಮ್ ॥

ಚರಿತಂ ರಘುನಾಥಸ್ಯ ಶತಕೋಟಿಪ್ರವಿಸ್ತರಮ್ ।
ಏಕೈಕಮಕ್ಷರಂ ಪುಂಸಾಂ ಮಹಾಪಾತಕನಾಶನಮ್ ॥ ೧ ॥

ಧ್ಯಾತ್ವಾ ನೀಲೋತ್ಪಲಶ್ಯಾಮಂ ರಾಮಂ ರಾಜೀವಲೋಚನಮ್ ।
ಜಾನಕೀಲಕ್ಷ್ಮಣೋಪೇತಂ ಜಟಾಮುಕುಟಮಂಡಿತಮ್ ॥ ೨ ॥

ಸಾಸಿತೂಣಧನುರ್ಬಾಣಪಾಣಿಂ ನಕ್ತಂಚರಾಂತಕಮ್ ।
ಸ್ವಲೀಲಯಾ ಜಗತ್ತ್ರಾತುಮಾವಿರ್ಭೂತಮಜಂ ವಿಭುಮ್ ॥ ೩ ॥

ರಾಮರಕ್ಷಾಂ ಪಠೇತ್ ಪ್ರಾಜ್ಞಃ ಪಾಪಘ್ನೀಂ ಸರ್ವಕಾಮದಾಮ್ ।
ಶಿರೋ ಮೇ ರಾಘವಃ ಪಾತು ಫಾಲಂ ದಶರಥಾತ್ಮಜಃ ॥ ೪ ॥

ಕೌಸಲ್ಯೇಯೋ ದೃಶೌ ಪಾತು ವಿಶ್ವಾಮಿತ್ರಪ್ರಿಯಃ ಶ್ರುತೀ ।
ಘ್ರಾಣಂ ಪಾತು ಮಖತ್ರಾತಾ ಮುಖಂ ಸೌಮಿತ್ರಿವತ್ಸಲಃ ॥ ೫ ॥

ಜಿಹ್ವಾಂ ವಿದ್ಯಾನಿಧಿಃ ಪಾತು ಕಂಠಂ ಭರತವಂದಿತಃ ।
ಸ್ಕಂಧೌ ದಿವ್ಯಾಯುಧಃ ಪಾತು ಭುಜೌ ಭಗ್ನೇಶಕಾರ್ಮುಕಃ ॥ ೬ ॥

ಕರೌ ಸೀತಾಪತಿಃ ಪಾತು ಹೃದಯಂ ಜಾಮದಗ್ನ್ಯಜಿತ್ ।
ಮಧ್ಯಂ ಪಾತು ಖರಧ್ವಂಸೀ ನಾಭಿಂ ಜಾಂಬವದಾಶ್ರಯಃ ॥ ೭ ॥

ಸುಗ್ರೀವೇಶಃ ಕಟಿಂ ಪಾತು ಸಕ್ಥಿನೀ ಹನುಮತ್ಪ್ರಭುಃ ।
ಊರೂ ರಘೂತ್ತಮಃ ಪಾತು ರಕ್ಷಃಕುಲವಿನಾಶಕೃತ್ ॥ ೮ ॥

ಜಾನುನೀ ಸೇತುಕೃತ್ ಪಾತು ಜಂಘೇ ದಶಮುಖಾಂತಕಃ ।
ಪಾದೌ ವಿಭೀಷಣಶ್ರೀದಃ ಪಾತು ರಾಮೋಽಖಿಲಂ ವಪುಃ ॥ ೯ ॥

ಏತಾಂ ರಾಮಬಲೋಪೇತಾಂ ರಕ್ಷಾಂ ಯಃ ಸುಕೃತೀ ಪಠೇತ್ ।
ಸ ಚಿರಾಯುಃ ಸುಖೀ ಪುತ್ರೀ ವಿಜಯೀ ವಿನಯೀ ಭವೇತ್ ॥ ೧೦ ॥

..............................................................................

ಆದಿಷ್ಟವಾನ್ ಯಥಾ ಸ್ವಪ್ನೇ ರಾಮರಕ್ಷಾಮಿಮಾಂ ಹರಃ ।
ತಥಾ ಲಿಖಿತವಾನ್ ಪ್ರಾತಃ ಪ್ರಬುದ್ಧೋ ಬುಧಕೌಶಿಕಃ ॥ ೧೫ ॥

ಇತಿ ಬುಧಕೌಶಿಕಸಂಗೃಹೀತಂ ಶ್ರೀ ರಾಮರಕ್ಷಾಸ್ತೋತ್ರಮ್ ॥



# ಶ್ರೀ ವಿಷ್ಣುಪಂಜರ ಸ್ತೋತ್ರಮ್

## ಸ್ಥೂಲಮಾಹಿತಿ

ಸ್ತೋತ್ರ ಸಂಗ್ರಾಹಕ ಪುಸ್ತಕಗಳಲ್ಲಿ ಯಾವ ಆಕರ ಗ್ರಂಥದಲ್ಲಿ ಪ್ರಸ್ತುತವಾದುದೆಂದು ಉಲ್ಲೇಖಿಸಲ್ಪಡದೆ, ಆದರೆ ಚಂದ್ರ ಅಥವಾ ಇಂದ್ರ ಹಾಗೂ ನಾರದರ ಸಂವಾದದಲ್ಲಿ ಪ್ರಕಟಗೊಂಡದ್ದೆಂದು ಉಲ್ಲೇಖಿಸಲ್ಪಟ್ಟಿರುವ 'ಶ್ರೀವಿಷ್ಣುಪಂಜರಸ್ತೋತ್ರ' ೨೪ ಶ್ಲೋಕಗಳನ್ನು ಒಳಗೊಂಡಿದೆ.

'ಪಾದೌ ರಕ್ಷತು ಗೋವಿಂದಃ... [೪] ಎಂಬಲ್ಲಿಂದ 'ಶ್ರೀವತ್ಸಾಂಕಶ್ಚ ಸರ್ವೇಷಾಮಂಗಾನಾಂ ರಕ್ಷಕೋ ಭವೇತ್ [೯] ಎಂಬಲ್ಲಿಯವರೆಗಿನ ಪದ್ಯಗಳಲ್ಲಿ ಗೋವಿಂದ, ತ್ರಿವಿಕ್ರಮ ಮುಂತಾದ ಶ್ರೀವಿಷ್ಣುವಿನ ನಾಮಗಳನ್ನು ಉಲ್ಲೇಖಿಸಿ, ಪಾದದಿಂದ ಕಂಠದವರೆಗೆ ಬೇರೆ ಬೇರೆ ಅವಯವಗಳ ರಕ್ಷಣೆಯನ್ನು ಪ್ರಾರ್ಥಿಸಲಾಗಿದೆ. 'ಪೂರ್ವಸ್ಯಾಂ ಪುಂಡರೀಕಾಕ್ಷಃ...' ಎಂಬಲ್ಲಿಂದ 'ಐಶಾನ್ಯಾಂ ಪಾತು ಕೇಶವಃ' — ಎಂಬಲ್ಲಿಯವರೆಗಿನ ಪದ್ಯಗಳಲ್ಲಿ ಎಂಟು ದಿಕ್ಕುಗಳಲ್ಲಿ ಸಂಭವಿಸಬಹುದಾದ ಆಪತ್ತುಗಳಿಂದ ಸಂರಕ್ಷಣೆಯನ್ನು ಕೇಳಿಕೊಳ್ಳಲಾಗಿದೆ.

ಮುಂದಿನ ಹದಿಮೂರು ಪದ್ಯಗಳಲ್ಲಿ ಮುಖ್ಯವಾಗಿ ವಿಷ್ಣುಪಂಜರ ಸ್ತೋತ್ರದ 'ಫಲಶ್ರುತಿ' ನಿರೂಪಿತವಾಗಿದ್ದರೆ, ಮಧ್ಯೇ ಎರಡು ಮೂರು ಪದ್ಯಗಳಲ್ಲಿ [೧೪, ೧೫, ೧೬ ಹಾಗೂ ೧೭] ಆಕಾಶ, ಜಲ, ಅಡವೀ ಮುಂತಾದ ಪ್ರದೇಶಗಳಲ್ಲಿ ಆಪತ್ತು ಬಾರದಂತೆ ರಕ್ಷಿಸಲು ಪ್ರಾರ್ಥಿಸಿಕೊಳ್ಳಲಾಗಿದೆ.

ಹೀಗೆ ವಿಕ್ಷಿಪ್ತವಾಗಿ ಬೇರೆ ಬೇರೆ ಬಗೆಯ ಸಂರಕ್ಷಣೆ ಇಲ್ಲಿ ಪ್ರಾರ್ಥಿಸಲ್ಪಡುವುದು. 'ರಕ್ಷಂತು ದೇವತಾಃ ಸರ್ವಾ ಬ್ರಹ್ಮವಿಷ್ಣುಮಹೇಶ್ವರಾಃ' [೧೫] ಎಂಬುದಾಗಿ ತ್ರಿಮೂರ್ತಿಗಳನ್ನು ಒಟ್ಟಾಗಿ ಉಲ್ಲೇಖಿಸಿ ಅವರೆಲ್ಲರೂ ಸಂರಕ್ಷಿಸಲೆಂದು ಪ್ರಾರ್ಥಿಸಿಕೊಳ್ಳುವುದನ್ನು 'ವಿಷ್ಣುಪಂಜರ ಸ್ತೋತ್ರ' ಉಲ್ಲೇಖಿಸುವುದರಲ್ಲಿ ಔಚಿತ್ಯ ಕಾಣಿಸದು.



# ಶ್ರೀ ವಿಷ್ಣು ಪಂಜರ ಸ್ತೋತ್ರಮ್

ಪರಂ ಪರಸ್ಮಾತ್ ಪ್ರಕೃತೇರನಾದಿಂ
ಏಕಂ ನಿವಿಷ್ಟಂ ಬಹುಧಾ ಗುಹಾಯಾಮ್ ।
ಸರ್ವಾಲಯಂ ಸರ್ವಚರಾಚರಸ್ಥಂ
ನಮಾಮಿ ವಿಷ್ಣುಂ ಜಗದೇಕನಾಥಮ್ ॥ ೧ ॥

ವಿಷ್ಣುಪಂಜರಕಂ ದಿವ್ಯಂ ಸರ್ವದುಷ್ಟನಿವಾರಣಮ್ ।
ಉಗ್ರತೇಜೋ ಮಹಾವೀರ್ಯಂ ಸರ್ವಶತ್ರುನಿಕೃಂತನಮ್ ॥ ೨ ॥

ತ್ರಿಪುರಂ ದಹಮಾನಸ್ಯ ರಹಸ್ಯಂ ಬ್ರಹ್ಮಣೋದಿತಮ್ ।
ತದಹಂ ಸಂಪ್ರವಕ್ಷ್ಯಾಮಿ ಆತ್ಮರಕ್ಷಾಕರಂ ನೃಣಾಮ್ ॥ ೩ ॥

ಪಾದೌ ರಕ್ಷತು ಗೋವಿಂದೋ ಜಂಘೇ ಚೈವ ತ್ರಿವಿಕ್ರಮಃ ।
ಊರೂ ಮೇ ಕೇಶವಃ ಪಾತು ಕಟಿಂ ಚೈವ ಜನಾರ್ದನಃ ॥ ೪ ॥

ನಾಭಿಂ ಚೈವಾಚ್ಯುತಃ ಪಾತು ಗುಹ್ಯಂ ಚೈವ ತು ವಾಮನಃ ।
ಉದರಂ ಪದ್ಮನಾಭಶ್ಚ ಪೃಷ್ಠಂ ಚೈವ ತು ಮಾಧವಃ ॥ ೫ ॥

ವಾಮಪಾರ್ಶ್ವಂ ತಥಾ ವಿಷ್ಣುರ್ದಕ್ಷಿಣಂ ಮಧುಸೂದನಃ ।
ಬಾಹೂ ವೈ ವಾಸುದೇವಶ್ಚ ಹೃದಿ ದಾಮೋದರಸ್ತಥಾ ॥ ೬ ॥

ಕಂಠಂ ರಕ್ಷತು ವಾರಾಹಃ ಕೃಷ್ಣಶ್ಚ ಮುಖಮಂಡಲಮ್ ।
ಮಾಧವಃ ಕರ್ಣಮೂಲೇ ತು ಹೃಷೀಕೇಶಶ್ಚ ನಾಸಿಕೇ ॥ ೭ ॥

ನೇತ್ರೇ ನಾರಾಯಣೋ ರಕ್ಷೇಲ್ಲಲಾಟಂ ಗರುಡಧ್ವಜಃ ।
ಕಪೋಲೌ ಕೇಶವೋ ರಕ್ಷೇದ್ವೈಕುಂಠಃ ಸರ್ವತೋದಿಶಮ್ ॥ ೮ ॥

ಶ್ರೀವತ್ಸಾಂಕಶ್ಚ ಸರ್ವೇಷಾಮಂಗಾನಾಂ ರಕ್ಷಕೋ ಭವೇತ್ ।
ಪೂರ್ವಸ್ಯಾಂ ಪುಂಡರೀಕಾಕ್ಷ ಆಗ್ನೇಯ್ಯಾಂ ಶ್ರೀಧರಸ್ತಥಾ ॥ ೯ ॥

ದಕ್ಷಿಣೇ ನಾರಸಿಂಹಶ್ಚ ನಿರ್ಋತ್ಯಾಂ ಮಾಧವೋಽವತು ।
ಪುರುಷೋತ್ತಮೋ ಮೇ ವಾರುಣ್ಯಾಂ ವಾಯುವ್ಯಾಂ ಚ ಜನಾರ್ದನಃ ॥ ೧೦ ॥

ಗದಾಧರಸ್ತು ಕೌಬೇರ್ಯಾಮೈಶಾನ್ಯಾಂ ಪಾತು ಕೇಶವಃ ।
ಆಕಾಶೇ ಚ ಗದಾ ಪಾತು ಪಾತಾಲೇ ಚ ಸುದರ್ಶನಮ್ ॥ ೧೧ ॥

ಸನ್ನದ್ಧಃ ಸರ್ವಗಾತ್ರೇಷು ಪ್ರವಿಷ್ಟೋ ವಿಷ್ಣುಪಂಜರಮ್ ।
ವಿಷ್ಣುಪಂಜರವಿಷ್ಟೋಽಹಂ ವಿಚರಾಮಿ ಮಹೀತಲೇ ॥ ೧೨ ॥

ರಾಜದ್ವಾರೇಽಪಥೇ ಘೋರೇ ಸಂಗ್ರಾಮೇ ಶತ್ರುಸಂಕಟೇ ।
ನದೀಷು ಚ ರಣೇ ಚೈವ ಚೋರವ್ಯಾಘ್ರಭಯೇಷು ಚ ॥ ೧೩ ॥

ಡಾಕಿನೀಪ್ರೇತಭೂತೇಷು ಭಯಂ ತಸ್ಯ ನ ಜಾಯತೇ ।
ರಕ್ಷ ರಕ್ಷ ಮಹಾದೇವ ರಕ್ಷ ರಕ್ಷ ಜನೇಶ್ವರ ॥ ೧೪ ॥

ರಕ್ಷಂತು ದೇವತಾಃ ಸರ್ವಾ ಬ್ರಹ್ಮವಿಷ್ಣುಮಹೇಶ್ವರಾಃ ।
ಜಲೇ ರಕ್ಷತು ವಾರಾಹಃ ಸ್ಥಲೇ ರಕ್ಷತು ವಾಮನಃ ॥ ೧೫ ॥

ಅಟವ್ಯಾಂ ನರಸಿಂಹಶ್ಚ ಸರ್ವತಃ ಪಾತು ಕೇಶವಃ ।
ದಿವಾ ರಕ್ಷತು ಮಾಂ ಸೂರ್ಯೋ ರಾತ್ರೌ ರಕ್ಷತು ಚಂದ್ರಮಾಃ ॥ ೧೬ ॥

ಪಂಥಾನಂ ದುರ್ಗಮಂ ರಕ್ಷೇತ್ ಸರ್ವಮೇವ ಜನಾರ್ದನಃ ।
ರೋಗವಿಘ್ನಹತಶ್ಚೈವ ಬ್ರಹ್ಮಹಾ ಗುರುತಲ್ಪಗಃ ॥ ೧೭ ॥

ಸ್ತ್ರೀಹತ್ಯಾಬಾಲಘಾತೀ ಚ ಸುರಾಪೀ ವೃಷಲೀಪತಿಃ ।
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥ ೧೮ ॥

ಗೋಸಹಸ್ರಫಲಂ ತಸ್ಯ ವಾಜಪೇಯಶತಸ್ಯ ಚ ।
ಅಶ್ವಮೇಧಸಹಸ್ರಸ್ಯ ಫಲಂ ಪ್ರಾಪ್ನೋತಿ ಮಾನವಃ ॥
ಸರ್ವಕಾಮಂ ಲಭೇದಸ್ಯ ಪಠನಾನ್ನಾತ್ರ ಸಂಶಯಃ ॥ ೨೦ ॥

ಜಲೇ ವಿಷ್ಣುಃ ಸ್ಥಲೇ ವಿಷ್ಣುಃ
ವಿಷ್ಣುಃ ಪರ್ವತಮಸ್ತಕೇ ।
ಜ್ವಾಲಾಮಾಲಾಕುಲೇ ವಿಷ್ಣುಃ ಸರ್ವಂ ವಿಷ್ಣುಮಯಂ ಜಗತ್ ।

ಇತಿ ಚ (ಇ)ಂದ್ರನಾರದ ಸಂವಾದೇ ಶ್ರೀ ವಿಷ್ಣುಪಂಜರಸ್ತೋತ್ರಮ್ ।



## ಶ್ರೀ ವಾದಿರಾಜತೀರ್ಥ ವಿರಚಿತಂ

# ಶ್ರೀ ರಘುನಾಥಕವಚವಮ್

೨೪ ಪದ್ಯಗಳನ್ನೊಳಗೊಂಡ ಶ್ರೀ ವಾದಿರಾಜತೀರ್ಥರ ಶ್ರೀ ರಘುನಾಥ ಕವಚದ ಮೊದಲ ಪದ್ಯದಲ್ಲಿ 'ಪಥಿ ಪಥಿ ಗುಣಸಾಂದ್ರಃ ಪಾತು ಮಾಂ ರಾಮಚಂದ್ರಃ' ಎಂಬುದಾಗಿ ಪ್ರತಿಯೊಂದು ಹಾದಿಯಲ್ಲೂ ಕಾಪಾಡುವಂತೆ ಶ್ರೀರಾಮಚಂದ್ರನಲ್ಲಿ ಕೇಳಿಕೊಂಡು ಮುಂದೆ ಹದಿನೇಳುವರೆ ಪದ್ಯಗಳಲ್ಲಿ ಶಿರಸ್ಸಿನಿಂದ ಪ್ರಾರಂಭಿಸಿ ಪಾದದ ತಳದ ವರೆಗಿನ ಶರೀರದ ಬೇರೆ ಬೇರೆ ಅವಯವವನ್ನು ಕಾಪಾಡಲು ಪ್ರಾರ್ಥಿಸಲಾಗಿದೆ. ಹಾಗೆ ಪ್ರಾರ್ಥಿಸುವಾಗ ಶ್ರೀರಾಮಚಂದ್ರನ ಆಯಾ ಅವಯವದ ವೈಶಿಷ್ಟ್ಯವನ್ನು, ಸೌಂದರ್ಯವನ್ನು ಸಾರುವ ವಿಶೇಷಣದಿಂದ ಅವನನ್ನು ಸ್ತುತಿಸಲಾಗುವುದು. ಉದಾ 'ಶ್ರೀ ಮತ್ಕಿರೀಟ ವಿಭ್ರಾಜಿಶಿರಾಃ' ಕಾಂತಿಯುಕ್ತ ಕಿರೀಟದ ಧಾರಣೆಯಿಂದ ಶೋಭಿಸುವ ಶಿರಸ್ಸು ಉಳ್ಳವನು ಶ್ರೀರಾಮನೆಂದ್ರು ಸ್ತುತಿಸಿ ಅಂತಹವನು '...ಶಿರೋऽವತು' ನನ್ನ ಶಿರಸ್ಸನ್ನು ರಕ್ಷಿಸಲಿ-ಎಂದು ಬೇಡಿ ಕೊಳ್ಳಲಾಗುವುದು. ರಾಮಾಯಣಕತೆ ಕ್ರಮವಾಗಿ ಸೂಚಿತವಾಗವಂತೆಯೂ ಕೆಲವು ವಿಶೇಷಣಗಳನ್ನು ನೀಡಲಾಗಿದೆ. ಹತ್ತೊಂಭತ್ತನೇ ಪದ್ಯದ ಉತ್ತರಾರ್ಧದಿಂದ ಇಪ್ಪತ್ತೆರಡನೇ ಪದ್ಯದ ಪೂರ್ವಾರ್ಧದ ವರೆಗಿನ ಮೂರು ಪದ್ಯಗಳಲ್ಲಿ ನಾಲ್ಕು ದಿಕ್ಕುಗಳಲ್ಲೂ, ಮೇಲೂ, ಕೆಳಗೂ ರಕ್ಷಣೆಯನ್ನು ಕೇಳಿಕೊಳ್ಳಲಾಗಿದೆ. ಮುಂದಿನ ಎರಡುವರೆ ಶ್ಲೋಕಗಳಲ್ಲಿ ಈ ಕವಚದ ಧಾರಣೆಯ ಫಲವನ್ನು ತಿಳಿಸಲಾಗಿದೆ. 'ಅರಿಂ ಜಿತ್ವಾ ತು ಸಂಸಾರಂ ಯಾಸ್ಯತ್ಯಂತೇऽಪುನರ್ಭವಮ್' —ಮುಖ್ಯ ಶತ್ರು ಎನಿಸಿರುವ ಸಂಸಾರದ ಗೆಲುವಿನ ಜೊತೆಗೆ ಮೋಕ್ಷದ ಪ್ರಾಪ್ತಿಯೂ ಈ ಕವಚಧಾರಣೆಯ ಮುಖ್ಯಫಲ ಎಂದು ಉಪಸಂಹಾರಮಾಡಲಾಗಿದೆ.



# ಶ್ರೀ ರಘುನಾಥಕವಚವು

ಕಪಿಕಟಕಧುರೀಣಃ ಕಾರ್ಮುಕನ್ಯಸ್ತಬಾಣಃ
ಕ್ಷಪಿತದಿತಿಜಸೈನ್ಯಃ ಕ್ಷತ್ರಿಯೇಷ್ವಗ್ರಗಣ್ಯಃ ।
ಜಲಧಿರಚಿತಸೇತುರ್ಜಾನಕೀತೋಷಹೇತುಃ
ಪಥಿ ಪಥಿ ಗುಣಸಾಂದ್ರಃ ಪಾತು ಮಾಂ ರಾಮಚಂದ್ರಃ ॥ ೧ ॥

ಶ್ರೀ ಮತ್ಕಿರೀಟ ವಿಭ್ರಾಜಿಶಿರಾ ರಾಮಃ ಶಿರೋಽವತು ।
ಕುಟಿಲಾಲಕಸಂಶೋಭಿಲಲಾಟಾಂತಃ ಸುರಾರ್ಥಿತಃ ॥ ೨ ॥

ಮಾಣಿಕ್ಯವೌಕ್ತಿಕೋದ್ಭಾಸಿತಿಲಕಃ ಸೂರ್ಯವಂಶಜಃ ।
ಲಲಾಟಂ ಪಾತು ಸುಭ್ರೂರ್ಮೇ ಕೌಸಲ್ಯಾನಂದನೋ ಭ್ರುವೌ ॥ ೩ ॥

ಧನುರ್ವಿದ್ಯಾಪಾರದೃಶ್ವಾ ನೇತ್ರೇ ಪಾತ್ವಬ್ಜಲೋಚನಃ ।
ಲಸನ್ನಾಸಾಪುಟೋ ನಾಸಾಂ ವಿಶ್ವಾಮಿತ್ರವೃತೋಽವತು ॥ ೪ ॥

ಬಿಂಬೋಷ್ಠೋಽವ್ಯಾನ್ಮದೀಯೋಷ್ಠೌ ಶಂಭುಕಾರ್ಮುಕಭಂಜನಃ ।
ಕುಂದಕೋಶಲಸದ್ದಂತೋ ದಂತಾನ್ಮೇ ಜಾನಕೀಪತಿಃ ॥ ೫ ॥

ಮನೋಜ್ಞರಸನೋ ಜಿಹ್ವಾಂ ಪಾತು ಲೋಕಮಯಾಂತಕೃತ್ ।
ವಾಚಂ ವಾಖ್ಯಾವಿದಗ್ಧೋಽವ್ಯಾತ್ತ್ಯಕ್ತಸಾಮ್ರಾಜ್ಯಸಂಭ್ರಮಃ ॥ ೬ ॥

ಆಸ್ಯಂ ಚಂದ್ರೋಪಮಾಸ್ಯೋಽವ್ಯಾದ್ರಾಮಚಂದ್ರೋ ವನೇಚರಃ ।
ಕಂಬುಗ್ರೀವೋಽವತು ಗ್ರೀವಾಂ ಖರದೂಷಣಸೈನ್ಯಜಿತ್ ॥ ೭ ॥

ಚಾರುದೀರ್ಘಕರಃ ಪಾಣೀ ಮಾರೀಚಮೃಗಲುಬ್ಧಕಃ ।
ಕಂಕಣಾಂಗದಮುದ್ರಾಢ್ಯೋಽಂಗುಲೀಸ್ತ್ಯಕ್ತಪ್ರಿಯಾಕೃತಿಃ ॥ ೮ ॥

ಪಾತು ಪೀನಾಂಸಯುಗ್ಮೋಽಸೌ ಹನೂಮನ್ನಯನೋತ್ಸವಃ ।
ಹಾರಕೌಸ್ತುಭಭೃತ್ಕಂಠಮೂಲಂ ಸುಗ್ರೀವಸಖ್ಯಕೃತ್ ॥ ೯ ॥

ಉರಃ ಪಾತು ಮಹೋರಸ್ಕಃ ತಾಲಾತ್ಮಾಸುರಖಂಡನಃ ।
ಮಧ್ಯಂ ಕೃಶಲಸನ್ಮಧ್ಯಃ ಪಾತು ವಾಲ್ಯಂಗಭೇದನಃ ॥ ೧೦ ॥

ದರ್ಭಶಾಯೀ ವಿಭುಃ ಪಾತು ವಲೀಸ್ತ್ರಿವಲಿಪಲ್ಲವಃ ।
ತನೂದರಃ ಪಾತು ಕುಕ್ಷಿಂ ಕೃತಸೇತುರ್ಮಹಾರ್ಣವೇ ॥ ೧೧ ॥

ನಿಮ್ನನಾಭಿಃ ಪ್ರಭುಃ ಪಾತು ನಾಭಿಂ ಕಪಿಚಮೂಪತಿಃ ।
ಪೀತಾಂಬರಃ ಸ್ಫುರತ್ಕಾಂಚಿದ್ಯೋತಮಾನಕಟಿದ್ವಯಃ ॥ ೧೨ ॥

ಲಂಕಾಪ್ರಾಕಾರನಿರ್ಭೇದೀ ರಾಮಃ ಪಾತು ಕಟಿಂ ಮಮ ।
ಊರೂ ಕರಿಕರೋರುರ್ಮೇ ಚಾರುಬಾಣಧನುರ್ಧರಃ ॥ ೧೩ ॥

ಜೃಂಭಿರಾವಣಸೈನಾಬ್ಧಿಕುಂಭಸಂಭವಕೋಟಿಧೃಃ ।
ಜಾನುನೀ ವೃತ್ತವಿಲಸಜ್ಜಾನುಯುಗ್ಮೋ ಮಮಾವತು ॥ ೧೪ ॥

ಕುಂಭಕರ್ಣಾದಿನಿರ್ಭಂಗದಂಭೋಳಾಸಮಸಾಯಕಃ ।
ಜಂಘೇ ತುಂಗೇಭದಂತಾಭಜಂಘಾಯುಗ್ಮೋಽವತು ಪ್ರಭುಃ ॥ ೧೫ ॥

ದಶಾನನಶಿರೋಽರಣ್ಯಪರಶ್ವಧಪರಾಕ್ರಮಃ ।
ಮುಕ್ತಾಂಕುರಸಮಶ್ರೀಮದ್ಗುಲ್ಫೋ ಗುಲ್ಫೌ ಮಮಾವತು ॥ ೧೬ ॥

ಸಸಂಭ್ರಮಸುರಶ್ರೇಣೀಶಿರೋಜುಷ್ಟಾಂಘ್ರಿಪಲ್ಲವಃ ।
ಪಾದೌ ರಕ್ಷತು ಮೇ ನಿತ್ಯಂ ವಿಭೀಷಣಪದಪ್ರದಃ ॥ ೧೭ ॥

ನಖಾನ್ ಪಾತು ನಖಶ್ರೇಣೀಶಶಿದ್ಯೋತಿತದಿಙ್ಮುಖಃ ।
ಅಗ್ನಿಜ್ವಾಲೋದಿತಸ್ವೀಯಸೀತೋ ವೀತಚ್ಛಿದಾಕೃತಿಃ ॥ ೧೮ ॥

ರಕ್ತಪಾದತಲಾದಿತ್ಯಃ ಪಾತು ಪಾದತಲೇ ಮಮ ।
ಪ್ರಾಪ್ತಯೋಧ್ಯಾಪುರೈಶ್ವರ್ಯಃ ಪ್ರಾಚ್ಯಾಂ ಪಾತು ಮನೋರಮಃ ॥೧೯॥

ಧರ್ಮಪ್ರವರ್ತಕಃ ಪಾಯಾದವಾಚ್ಯಾಂ ನೀರದದ್ಯುತಿಃ ।
ಪಾತು ಪ್ರತೀಚ್ಯಾಂ ಯಜ್ವೇಂದ್ರೋ ಹನೂಮತ್ಪರಮೇಷ್ಟದಃ ॥ ೨೦ ॥

ಉದೀಚ್ಯಾಮುದ್ಗತಾಯೋಗ ವಿದೇಹತನಯಾಪ್ರಿಯಃ ।
ಅಧೋಽಧಃಕೃತಪಾಪೌಘಃ ಪಾತು ರಾಮೋಽಖಿಲಾಗ್ರಣೀಃ ॥ ೨೧ ॥

ಊರ್ಧ್ವಮುನ್ನೀತಸಜ್ಜೀವನಾನಾಸಂಘಸುಖಪ್ರದಃ ।
ಯ ಇದಂ ರಘುನಾಥಸ್ಯ ಕವಚಂ ಬಿಭೃಯಾನ್ನರಃ ॥ ೨೨ ॥

ಯತಿನಾ ವಾದಿರಾಜೇನ ರಚಿತಂ ನಿರ್ಮಲಂ ದೃಢಮ್ ।
ಸ್ಪೃಷ್ಟುಂ ತಂ ನೈವ ರಕ್ಷಾಂಸಿ ಪಾಪಾನಿ ರಿಪವೋಽಪಿ ವಾ ॥ ೨೩ ॥

ವಿಪದೋ ವ್ಯಾಧಯೋ ವಾಽಪಿ ಶಕ್ನುವಂತಿ ಶರೋಪಮಾಃ ।
ಅರಿಂ ಜಿತ್ವಾ ತು ಸಂಸಾರಂ ಯಾಸ್ಯತ್ಯಂತೇಽಪುನರ್ಭವಮ್ ॥ ೨೪ ॥

**ಇತಿ ಶ್ರೀಮದ್ವಾದಿರಾಜತೀರ್ಥವಿರಚಿತಂ ಶ್ರೀರಘುನಾಥಕವಚಮ್ ।**



## ಪರಿಶಿಷ್ಟ :

### ಸಂಬಂಧಪಟ್ಟರೂಪಗಳಲ್ಲಿಯೇ ಪ್ರಾರ್ಥನೆ:

ಭಗವಂತನ ರೂಪಗಳಲ್ಲಿ ಅನ್ಯೋನ್ಯವಾಗಿ ಏನೂ ವೈಲಕ್ಷಣ್ಯವಿಲ್ಲ. ಆದರೆ ಯಾವುದಾದರೊಂದು ವಿಶಿಷ್ಟಕಾರ್ಯದ ನಿರ್ವಹಣೆಗಾಗಿ, ವಿಶಿಷ್ಟ ಸಂದರ್ಭದಲ್ಲಿ ಅಭಿವ್ಯಕ್ತವಾಗುವ ರೂಪ ಆಯಾ ಸಂದರ್ಭಕ್ಕೆ, ಕಾರ್ಯಕ್ಕೆ, ಉದ್ದೇಶಕ್ಕೆ ವಿಶೇಷವಾಗಿ ಅನುಗುಣವಾಗಿರುವಂತಹದ್ದಾಗಿರುತ್ತದೆ. ಆದ್ದರಿಂದ ಅಂತಹ ಸ್ಥಳದಲ್ಲಿ, ಸಂದರ್ಭದಲ್ಲಿ, ಆಯಾ ಉದ್ದೇಶಕ್ಕಾಗಿ ಆಯಾ ರೂಪವನ್ನೇ ಪ್ರಾರ್ಥಿಸಿಕೊಳ್ಳುವುದು ಔಚಿತ್ಯಪೂರ್ಣ. "ತಂ ಯಥಾ ಯಥಾ ಉಪಾಸತೇ ತದೇವ ಭವತಿ"—ಎಂಬ ಶ್ರುತಿಯು ಉಪಾಸನೆಗೆ ಅನುಗುಣವಾದ ಫಲಪ್ರಾಪ್ತಿಯನ್ನು ತಿಳಿಸುವುದರ ಮೂಲಕ ಸಾಧಕನು ಭಗವಂತನಿಂದ ಪಡೆದುಕೊಳ್ಳಲು ಬಯಸುವ ಫಲಕ್ಕೆ ಅನುಗುಣವಾಗಿ, ಅದಕ್ಕೆ ಸಂಬಂಧಿಸುವ ಭಗವದ್ರೂಪಗಳನ್ನೇ ಪ್ರಾರ್ಥಿಸಿಕೊಳ್ಳಬೇಕೆಂದು ಸೂಚಿಸಿದೆ.

ಈ ನಿಟ್ಟಿನಲ್ಲಿ ಪರಿಶೀಲಿಸಿದೆವೆಂದರೆ "ನಾರಾಯಣವರ್ಮ"ದಲ್ಲಿ ಉಲ್ಲೇಖಿಸಲ್ಪಡುವ ಭಗವದ್ರೂಪಗಳಿಗೂ, ಅವುಗಳಲ್ಲಿ ಸಲ್ಲಿಸಲಾಗುವ ಪ್ರಾರ್ಥನೆಗಳಿಗೂ ನಂಟು ಇರುವುದು ಸ್ಪಷ್ಟವಾಗದಿರದು. ಆ ನಂಟನ್ನು ಗುರುತಿಸಿಕೊಂಡು ಸಲ್ಲಿಸುವ ಪ್ರಾರ್ಥನೆ ಅಧಿಕಫಲಪ್ರದವೆನಿಸಬಲ್ಲದು. ಅನ್ವರ್ಥಕವಾಗಿ ನಾಮಗಳನ್ನು ಹೊಂದಿರುವ ಆಯಾ ಭಗವದ್ರೂಪಗಳಲ್ಲಿ ಆಯಾ ಫಲಪ್ರದಾನವಿಷಯದಲ್ಲಿ ಬೇರೆ ಬೇರೆ ನಾಮಗಳು ಹೇಗೆ ತೆರೆದುಕೊಳ್ಳಬಲ್ಲವೆಂಬುದರ ವಿವೇಚನೆಯೂ ಅನುಸಂಧಾನಕ್ಕೆ ಪುಷ್ಟಿ ನೀಡುವಂತಹದ್ದು.

### ಕಾಪಸನೇ ಹರಿಃ

'ಹರಿರ್ವಿದಧ್ಯಾತ್....' —ಎಂಬ ಮೊದಲ ಪದ್ಯದಲ್ಲಿ ಹರಿ ಎಂಬ ಹೆಸರಿನ ಭಗವದ್ರೂಪವನ್ನು ಉಲ್ಲೇಖಿಸಲಾಗಿದೆ. 'ಹರಿ'—ಎಂಬುದು ಭಗವಂತನ ಮೂಲ ರೂಪಕ್ಕೆ ಸಂಬಂಧಿಸಿರುವ ಹೆಸರಾದರೂ 'ನಾರಾಯಣವರ್ಮ'ದಲ್ಲಿ ಭಗವಂತನ ಬೇರೆ ಬೇರೆ ರೂಪಗಳನ್ನೇ ಉಲ್ಲೇಖಿಸಿರುವುದರಿಂದ 'ಹರಿ' ಎಂಬುದೂ ಅವನ

ರೂಪವಿಶೇಷ ಎಂದು ಭಾವಿಸಬಹುದಾಗಿದೆ.[1]

ಯಮಧರ್ಮ ಮತ್ತು ಮೂರ್ತಿ ಇವರಲ್ಲಿ ಅವತರಿಸಿರುವ ನಾಲ್ಕು ಭಗವದ್ರೂಪಗಳಲ್ಲಿ ಹರಿ ಎಂಬ ಹೆಸರಿನ ರೂಪವೂ ಒಂದು.[2] ನರ ಮತ್ತು ನಾರಾಯಣ ರೂಪಗಳ ಉಲ್ಲೇಖ ನಾರಾಯಣವರ್ಮದಲ್ಲಿ ಬಂದಿರುವುದರಿಂದ, ಅವುಗಳ ಜೊತೆಗಿರುವ ಹರಿರೂಪದ ಉಲ್ಲೇಖ ಇಲ್ಲಿ ಬಂದಿದೆ—ಎಂದು ಇಟ್ಟು ಕೊಳ್ಳಬಹುದಾಗಿದೆ.

ಅಥವಾ ತಾಪಸಮನ್ವಂತರದಲ್ಲಿ ಗಜೇಂದ್ರನಿಗೆ ಮೊಸಳೆಯು ಹಿಡಿತದಿಂದ ಬಿಡುಗಡೆಯನ್ನು ಅನುಗ್ರಹಿಸಿದ ರೂಪ ಹರಿ ಎಂದೆನಿಸಿರುವಂತಹದ್ದು. ಗಜೇಂದ್ರ ನಿಂದ 'ಹರಿ' ಎಂದು ಸ್ತುತಿಸಲ್ಪಟ್ಟದ್ದೆಂದೇ ಉಲ್ಲೇಖಿಸಲ್ಪಟ್ಟಿದೆ.[3] ಆ ರೂಪ ವನ್ನು ಪರಿಚಯಿಸಿಕೊಡಲು ಶ್ರೀಮದಾಚಾರ್ಯರು ಉಲ್ಲೇಖಿಸಿರುವ 'ಮಾತ್ಸ್ಯ' ದಲ್ಲೂ 'ಹರಿ' – ಎಂಬ ಹೆಸರನ್ನೂ ಉಲ್ಲೇಖಿಸಲಾಗಿದೆ.[4] ಈ ರೂಪವನ್ನು ಇಲ್ಲಿ ಇಟ್ಟುಕೊಳ್ಳಬಹುದಾಗಿದೆ. "ಇಂದ್ರದ್ಯುಮ್ನ'ನಂತಹ ಭಕ್ತರಿಗೆ ಬಂದ ಆಪತ್ತನ್ನು ಪರಿಹರಿಸಿ ರಕ್ಷಣೆ ನೀಡಿದ ಈ ಭಗವದ್ರೂಪದಿಂದ ರಕ್ಷಣೆಯ ಅನುಗ್ರಹವನ್ನು ನಾವೂ ಪ್ರಾರ್ಥಿಸಿಕೊಳ್ಳಬೇಕು.

'ಹರಿಃ' – ಎಂಬುದಕ್ಕೆ ಅತಿಶಯವಾಗಿ, ಅಂದರೆ ಇತರ ಯಾವುದೇ ದೇವತೆ ಪರಿಹರಿಸಲಾರದಷ್ಟು ಪ್ರಮಾಣದಲ್ಲಿ ಭಕ್ತರ ಆಪತ್ತುಗಳನ್ನೂ, ಅವುಗಳಿಗೆ ಕಾರಣ ಗಳಾದ ಪಾಪಗಳನ್ನೂ ಪರಿಹರಿಸುವವನೆಂದೂ, ರಕ್ಷಣೆಗೆ ಬೇಕಾದ ಧೈರ್ಯ,

---

1 ಹರಿರ್ಧರ್ಮಾಖ್ಯಮೂರ್ತಿಃ —ಟಿಪ್ಪೀ

2 ‹ನರೋ ನಾರಾಯಣಶ್ಚೈವ ಹರಿಃ ಕೃಷ್ಣಸ್ತಥೈವ ಚ । ಚತ್ವಾರೋ ಧರ್ಮತನಯಾ ಹರಿರೇವ ತ್ರಯೋ ಮತಾಃ' —ಪಾದ್ಮೇ (ಭಾ.ತಾ.ನಿ. 2-7-6)

3 ಹರಿರಿತ್ಯಾಹುತೋ ಯೇನ ಗಜೇಂದ್ರೋ ಮೋಚಿತೋ ಗ್ರಹಾತ್ (—ಭಾ.ತಾ.ನಿ. 6-1-27)

4 ಹರಿಸ್ತಾಪಸನಾಮಾಽಸೌ ಜಾತಸ್ತಪಸಿ ವೈ ಮನುಃ । ಗಜೇಂದ್ರಂ ಮೋಚಯಾ ಮಾಸ ಸಸರ್ಜ ಚ ಜಗದ್ವಿಭುಃ । —ಮಾತ್ಸ್ಯೇ (ಭಾಗ ತಾ.ನಿ. 2-7-16)

* ತಾಪಸನಾಮಾಽಯಂ ಭಗವಾನ್ ಹರಿರಿತ್ಯಪಿ ವ್ಯವಹ್ರಿಯತೇ ಇತ್ಯನೇನ ವಚನೇನ ಜ್ಞಾಯತೇ —ಬ. ಗೋ.

ಸಾಮರ್ಥ್ಯ, ಬುದ್ಧಿವಂತಿಕೆ ಇತ್ಯಾದಿಗಳನ್ನು ತಲುಪಿಸುವವನೆಂದೂ ಅರ್ಥ.[1] ಹೀಗೆ ಎಲ್ಲ ಬಗೆಯ 'ಅನಿಷ್ಟನಿವೃತ್ತಿ', 'ಇಷ್ಟಪ್ರಾಪ್ತಿ'ಗಳನ್ನು ಒದಗಿಸುವ ವ್ಯಕ್ತಿತ್ವ ಹರಿ ಎನಿಸುವ ಭಗವಂತನಲ್ಲಿ ಇರುವುದರಿಂದಾಗಿ ಅವನಲ್ಲಿ 'ಸರ್ವರಕ್ಷೆ'ಯನ್ನು ಪ್ರಾರ್ಥಿಸಿಕೊಂಡಿರುವುದು ಸಮುಚಿತ.

### ನೀರಿನಲ್ಲಿ ಮತ್ಸ್ಯನಿಂದ ರಕ್ಷಣೆ :

ಪ್ರಲಯಜಲದಲ್ಲಿ ವಿಹರಿಸಿರುವ ಮತ್ಸ್ಯರೂಪಿ ಪರಮಾತ್ಮನಿಂದ ನೀರಿನಲ್ಲಿ ಯಾವುದೇ ಜಲಚರಗಳಿಂದ ಆಪತ್ತು ಒದಗದಂತೆ ಪ್ರಾರ್ಥಿಸಿಕೊಳ್ಳಲಾಗುವುದು. ಪ್ರಲಯಜಲದಲ್ಲೂ ಸತ್ಯವ್ರತರಾಜನಿಗೆ ರಕ್ಷಣೆ ನೀಡಿ, ಅನುಗ್ರಹಿಸಿದ 'ಮತ್ಸ್ಯ' ಭಕ್ತರಿಗೆ ಸಾಮಾನ್ಯ ಜಲಾಶಯಗಳಲ್ಲಿ ರಕ್ಷಣೆಯನ್ನು ಅನುಗ್ರಹಿಸದಿರಲಾರ.

ಜಲದಲ್ಲಿ ದುಷ್ಟ ಜಲಚರ ಪ್ರಾಣಿಗಳಿಂದ ರಕ್ಷಣೆಯನ್ನು ಅನುಗ್ರಹಿಸುವಂತೆ ಜಲದ ವಿಷಯದಲ್ಲಿ ಅದರ ಅಭಿಮಾನಿದೇವತೆಗಳನ್ನು ಗುರುತಿಸಿಕೊಳ್ಳದೆ ಎಸಗ ಬಹುದಾದ ವಿವಸ್ತ್ರರಾಗಿ ಮೀಯುವುದು, ನೀರಿನಲ್ಲಿ ಮಲ ಮೂತ್ರ ವಿಸರ್ಜಿಸುವುದು —ಮುಂತಾದ ಅಪರಾಧಗಳಿಂದ ರಕ್ಷಿಸಬೇಕು. ಅಂದರೆ ಅಂತಹ ಅಪರಾಧಗಳು ನಡೆಯದಂತೆ ಅದಕ್ಕೆ ಬೇಕಾದ ಜಾಗ್ರತಿಯನ್ನು ನೀಡಬೇಕು. ಒಂದು ವೇಳೆ, ಪ್ರಾರಬ್ಧಕರ್ಮಕ್ಕನುಗುಣವಾಗಿ ಅಂತಹ ಅಪರಾಧಗಳು ನಡೆದು ಹೋದರೆ ಆ ಪ್ರಯುಕ್ತ ಅಷ್ಟೊಂದು ಪಾಪ ಸಂಭವಿಸದಂತೆ ರಕ್ಷಿಸಬೇಕು. ಈ ಬಗೆಯ ಪ್ರಾರ್ಥನೆಯೂ "ಜಲೇಷು ಮಾಂ ರಕ್ಷತು ಮತ್ಸ್ಯಮೂರ್ತಿಃ" —ಎಂಬ ಮಾತಿನ ಅರ್ಥವ್ಯಾಪ್ತಿಯಲ್ಲಿ ಸೇರಿಕೊಳ್ಳುವುದು.

ಹೀಗೆ ಜಲದಲ್ಲಿ ಆಪತ್ತುಗಳನ್ನು ಪರಿಹರಿಸಿ ಸಂತೋಷಪಡಿಸುವುದರಿಂದ ಅಥವಾ ನೀರಿನ ಸ್ನಾನದಿಂದ ಪ್ರಸನ್ನತೆಯನ್ನು ನೀಡುವುದರಿಂದ 'ಮತ್ಸ್ಯ'[2] ಎನಿಸಿ ರುವವನು ಭಗವಂತನು. ಜಲದಲ್ಲಿ ಹಿಂಸಿಸುವ ದುಷ್ಟಪಶುಗಳನ್ನು ನಾಶ ಮಾಡು ವವನು ಅವನೆಂಬ ಅರ್ಥದಲ್ಲೂ ಅವನು 'ಮತ್ಸ್ಯ'.[3]

---

1 ಅತಿಶಯೇನ ಹರತಿ ಪರಿಹರತಿ ಆಪದಃ ತನ್ನಿಮಿತ್ತಪಾಪಾನಿ ಚೇತಿ ಹರಿಃ, 'ತೃತೀಯೋಽತಿಶಯೇ' । ತಥಾ ಅತಿಶಯೇನ ಹರತಿ ಆಹರತಿ ಧೈರ್ಯ-ಸಾಮರ್ಥ್ಯ - ಬುದ್ಧ್ಯಾದೀನೀತಿ ಚ ಹರಿಃ ।

2 ಮಾದಯತಿ ಜಲೇಷು ಆಪದಃ ಪರಿಹೃತ್ಯ ಸಂತೋಷಯತೀತಿ ಮತ್ಸ್ಯಃ 'ಮದ ಹರ್ಷೇ' —ಸತ್ಯಧರ್ಮತೀರ್ಥೀಯಾನುಸಾರೇಣ

* ಮಾದಯತಿ ಜಲಸ್ನಾನೇನೇತಿ ಮತ್ಸ್ಯಃ ।

3 ಮಥ್ನಂತಿ ಹಿಂಸತೀತಿ ಮದಃ ಹಿಂಸಾಕಾರಣಾನಿ ಜಲಚರಾಸ್ತಾನ್ ಸ್ಯತಿ ನಾಶಯತೀತಿ ಮತ್ಸ್ಯಃ । —ವಿಜಯಧ್ವಜೀಯಾಧಾರೇಣ

## ಸ್ಥಳದಲ್ಲಿ ವಾಮನನಿಂದ ರಕ್ಷಣೆ:

ಬಲಿಯಿಂದ ಮೂರು ಹೆಜ್ಜೆ ಸ್ಥಳವನ್ನು ದಾನವಾಗಿ ಪಡೆದ ವಾಮನನಿಗೆ ಸ್ಥಳದ ಮೇಲೆ ವಿಶೇಷವಾದ ಅಧಿಕಾರವಿರುವುದರಿಂದ, ಅಂತಹ ವಾಮನನಲ್ಲಿ ಸ್ಥಳದಲ್ಲಿಯ ದುಷ್ಟಶಕ್ತಿಗಳ ಆಕ್ರಮಣದಿಂದ ಪಾರುಮಾಡಲು ಪ್ರಾರ್ಥಿಸಿಕೊಂಡಿರುವುದು ಸಮುಚಿತ.

ಸ್ಥಲದ ಮೇಲೆ, ಭೂಮಿಯ ಮೇಲೆ ಕಾಲಿಡುವುದು, ಉಗುಳುವುದು ಸೀನುವುದು–ಮುಂತಾದವುಗಳನ್ನು ನಡೆಸಿದಾಗ ಸ್ಥಲದ ವಿಷಯದಲ್ಲಿ ಅಪರಾಧವನ್ನೆಸಗಿದಂತಾಗುವುದು. 'ವಾಮನ'ನು ಅಂತಹ ಅಪರಾಧ ನಡೆಯದಂತೆ, ಅನಿವಾರ್ಯವಾಗಿ ನಡೆದಲ್ಲಿ–ಅದರಿಂದಾಗಿ ಹೆಚ್ಚು ಪಾಪ ಸಂಭವಿಸದಂತೆ ರಕ್ಷಣೆ ನೀಡುವನು.

ಹೀಗೆ ಸ್ಥಳದಲ್ಲಿಯ ವಿರೋಧಿಗಳನ್ನು ದೂರಸರಿಸುವುದರಿಂದ 'ವಾಮನ' ಎಂದೆನಿಸಿರುವವನು ಭಗವಂತನು.[1] ಅಂತೆಯೇ ಸ್ಥಲದ ಕುರಿತು ಸುಂದರವಾದ ಅನುಸಂಧಾನವನ್ನು ತಲುಪಿಸುವುದರಿಂದಲೂ ಅವನು 'ವಾಮನ'[2].

## ತ್ರಿವಿಕ್ರಮನಿಂದ ಆಕಾಶದಲ್ಲಿ ರಕ್ಷಣೆ:

'....ನಭಃ ಶರೀರೇಣ ದಿಶಶ್ಚ ಬಾಹುಭಿಃ'—ಎಂದು ಭಾಗವತದಲ್ಲಿ (8-20-33) ನಿರೂಪಿಸಲ್ಪಟ್ಟಿರುವಂತೆ ತನ್ನ ದೇಹದಿಂದ ಆಕಾಶತುಂಬ ವ್ಯಾಪಿಸಿಕೊಂಡಿರುವ 'ತ್ರಿವಿಕ್ರಮ' ಅಲ್ಲಿ ಯಾವುದೇ ಪಶುಪಕ್ಷಿಗಳು ನಮಗೆ ಹಾನಿ ಮಾಡದಂತೆ ರಕ್ಷಿಸುತ್ತಿರುವನು.

ಅವ್ಯಾಕೃತ ಆಕಾಶಕ್ಕೆ ಲಕ್ಷ್ಮೀದೇವಿ ಅಭಿಮಾನಿನಿಯಾಗಿದ್ದರೆ, ವ್ಯಾಕೃತ ಆಕಾಶಕ್ಕೆ ಗಣಪತಿ ಅಭಿಮಾನಿ. ಇದನ್ನು ವಿವೇಚಿಸಿಕೊಂಡು, ಅಭಿಮಾನಿ ದೇವತೆಗಳಿಗೆ ಅಪಚಾರ ಆಗದಂತೆ ನಡೆದುಕೊಳ್ಳಲು ಬೇಕಾದ ಆಕಾಶವಿಷಯದ ಜಾಗೃತಿಯನ್ನು ನೀಡುವುದರ ಮೂಲಕವೂ ಅವನು ನಮ್ಮನ್ನು ರಕ್ಷಿಸಬೇಕು.

ಭಕ್ತರ ರಕ್ಷಣೆಗಾಗಿ ತನ್ನ ಮೂರು ಹೆಜ್ಜೆಗಳಿಂದ ಎಲ್ಲೆಡೆ ವ್ಯಾಪಿಸಿರುವುದರಿಂದಾಗಿ ಭಗವಂತನು "ತ್ರಿವಿಕ್ರಮ" —ಎಂದೆನಿಸಿರುವುದಲ್ಲದೆ, ಪ್ರತಿಯೊಬ್ಬರ ಎಚ್ಚರ, ಕನಸು, ನಿದ್ದೆಗಳನ್ನು ನಿಯಂತ್ರಿಸುವುದಕ್ಕಾಗಿ ಶರೀರದ ಬಲಗಣ್ಣಿನ ತುದಿಭಾಗ, ಕಂಠ ಹಾಗೂ ಹೃದಯದಲ್ಲಿ ವಿಶ್ವ, ತೈಜಸ ಹಾಗೂ ಪ್ರಾಜ್ಞರೂಪಗಳಿಂದ

---

1 ವಾಮಾನ್ ಸ್ಥಲಸ್ಥಾನ್ ಪ್ರತೀಪಾನ್ ನಯತಿ ಅಪನಯತೀತಿ ವಾಮನಃ ।

2 ವಾಮಂ ಸುಂದರಂ ಸ್ಥಲವಿಷಯಕಂ ಅನುಸಂಧಾನಂ ನಯತಿ ಆನಯತಿ ಪ್ರಾಪಯತೀತಿ ವಾಮನಃ ।

ಇರುವವನಾದುದರಿಂದಲೂ ಅವನು ತ್ರಿವಿಕ್ರಮನು[1]. ಎಚ್ಚರದ ಅವಸ್ಥೆಯಲ್ಲಿ ಆಕಾಶದ ಅನುಸಂಧಾನ ಅವನಿಂದಲೇ ದೊರೆಯಬೇಕಾದದ್ದು.

## ಅರಣ್ಯಾದಿಗಳಲ್ಲಿ ನರಸಿಂಹನಿಂದ ರಕ್ಷಣೆ:

'ನೃಸಿಂಹಾದಿಕಮನ್ಯಚ್ಚ ದುರಿತಾದಿನಿವೃತ್ತಯೇ । ಉಪಾಸ್ಯತೇ ಯಥಾಯೋಗಂ ' ಎಂಬುದಾಗಿ ಬ್ರಹ್ಮತರ್ಕ (ಬ್ರ. ಸೂ. ಭಾ. 3-3-61) ತಿಳಿಸುವಂತೆ ಭಗವಂತನ ನರಸಿಂಹರೂಪದ ಉಪಾಸನೆ ಪಾಪ ಹಾಗೂ ಅದನ್ನು ನಿಯಂತ್ರಿಸುವ ಆಸುರೀಶಕ್ತಿಗಳ ನಿವಾರಣೆಗಾಗಿಯೇ ವಿಶೇಷವಾಗಿ ವಿಹಿತವಾಗಿರುವಂತಹದ್ದು. ಆದುದರಿಂದಲೇ ನಾರಾಯಣವರ್ಮದಲ್ಲಿ ನರಸಿಂಹರೂಪದ ಪ್ರಾರ್ಥನೆಯನ್ನು ಎರಡುಬಾರಿ ನಡೆಸಲಾಗಿದೆ. ಅರಣ್ಯ, ಯುದ್ಧರಂಗ ಮುಂತಾದ ಭಯಂಕರ ಪ್ರದೇಶಗಳಲ್ಲಿ ರಕ್ಷಣೆ ನೀಡಬೇಕೆಂದು ಒಮ್ಮೆಯಾದರೆ, ಮತ್ತೊಮ್ಮೆ ಅದೂ ನಾರಾಯಣವರ್ಮದ ಉಪಸಂಹಾರದಲ್ಲಿ ದಿಕ್ಕು ವಿದಿಕ್ಕುಗಳಲ್ಲಿ ಇದ್ದುಕೊಂಡು ರಕ್ಷಣೆ ನೀಡಬೇಕೆಂದು ಪ್ರಾರ್ಥಿಸಲಾಗಿದೆ. ಆಸುರೀಶಕ್ತಿಗಳ ದಮನದಲ್ಲಿ ನರಸಿಂಹ ರೂಪ ಪ್ರಧಾನಪಾತ್ರ ವಹಿಸಿರುವುದರಿಂದಲೇ ಅದನ್ನು ಎರಡು ಬಾರಿ ಪ್ರಾರ್ಥಿಸಿರುವುದು.

ನರಸಿಂಹರೂಪಿ ಅರಣ್ಯದಲ್ಲಿ, ಅಲ್ಲಿಯ ಗುಹೆಗಳಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವನೆಂದು,[2] ಅಲ್ಲಿ ಅವನಿಂದ ರಕ್ಷಣೆಯನ್ನು ಕೇಳಿಕೊಂಡಿರುವಂತಹದ್ದು ಸಮುಚಿತ. ನರಸಿಂಹನು ಭಕ್ತರ ಆಪತ್ತುಗಳನ್ನು ಪರಿಹರಿಸಿ, ಸುಖವನ್ನು ಹೇಗೆ ಅನುಗ್ರಹಿಸುವನೆಂಬುದಕ್ಕೆ ಪ್ರಹ್ಲಾದನೇ ಉತ್ತಮ ನಿದರ್ಶನ.

ಹೀಗೆ ಅರಣ್ಯ ಮುಂತಾದ ಭಯಂಕರ ಸ್ಥಳಗಳಲ್ಲಿ ಆಪತ್ತುಗಳನ್ನು ಪರಿಹರಿಸಿ, ಧೈರ್ಯವನ್ನು ತಲುಪಿಸುವ ಪ್ರಯುಕ್ತ ಅಥವಾ ಸಜ್ಜನರಿಗೆ ಪೀಡೆ ಕೊಡುವ ದುರ್ಜನರನ್ನು ದಂಡಿಸುವ ಪ್ರಯುಕ್ತ 'ನೃಸಿಂಹ' ಎಂದೆನಿಸಿರುವವನು[3] ಅವನು.

---

1 ತ್ರಿಭಿಃ ಪಾದೈಃ ವಿಕ್ರಮತೇ ಇತಿ, ತ್ರಿಷು ದೇಹಸ್ಯ ದಕ್ಷಿಣಾಕ್ಷಿಮುಖಾದಿಷು ತ್ರಿಷು ಭಾಗೇಷು ವಿಶೇಷೇಣ ಕ್ರಮತೇ ಇತಿ ತ್ರಿವಿಕ್ರಮಃ ।

2 ಕಕ್ಷಶ್ವಭ್ರೇ ನೃಸಿಂಹಸ್ಯ ಸದಾಽವಸ್ಥಿತಿಕಾರಣಾತ್ ।
ದ್ರವಂತಿ ಕಕ್ಷಶ್ವಭ್ರಾಭ್ಯಾಂ........' —ಛಾಂ. ಉ. ಭಾ. (2-1-9)

3 ನರತಿ ನೃಣಾತಿ ವಾ ನಯತಿ ಭಕ್ತಾನಾಂ ಧೈರ್ಯಂ ಸುಖಮಿತಿ ನಾಃ ।
ಹಿನಸ್ತಿ ಆಪದಃ ಇತಿ ಸಿಂಹಃ । ನಾ ಚಾಸೌ ಸಿಂಹಶ್ಚ ನೃಸಿಂಹಃ ।
ಅಥವಾ ನರಃ ದುರ್ಜನಾನ್ ಹಿನಸ್ತೀತಿ ನೃಸಿಂಹಃ, 'ದಸ್ಯುತ್ರಾಸಾಜ್ಜನಾರ್ದನಃ' ಇತಿ ಯಥಾ ।

**ಮಾರ್ಗದಲ್ಲಿ ವರಾಹನಿಂದ ರಕ್ಷಣೆ:**

ತನ್ನಷ್ಟಕ್ಕೇ ಭೂಮಿ ಸಮುದ್ರದಲ್ಲಿ ಮುಳುಗಿದಾಗ ಅದರ ಉದ್ಧಾರಕ್ಕಾಗಿ ಪ್ರಾದುರ್ಭವಿಸಿದ ವರಾಹ ಭೂಮಿಯನ್ನು ಮೇಲಕ್ಕೆತ್ತುವ ಮಾರ್ಗದಲ್ಲಿ ತಡೆ ಒಡ್ಡಲು ಬಂದ ಆದಿಹಿರಣ್ಯಾಕ್ಷನನ್ನು ಸಂಹರಿಸಿದವನು. ಭೂಮಿಯನ್ನು ಅದರ ಕಕ್ಷೆಯಲ್ಲಿ ಸ್ಥಾಪಿಸುವುದರ ಮೂಲಕ ಅದರಲ್ಲಿಯ ಮಾರ್ಗಗಳಿಗೆ ಆಧಾರನಾಗಿರುವನು. ಆದುದರಿಂದ ಅವನಲ್ಲಿ, ದಾರಿಯಲ್ಲಿ ಸಂಚರಿಸುವಾಗ ರಕ್ಷಣೆ ನೀಡುವಂತೆ ಪ್ರಾರ್ಥಿಸಿಕೊಳ್ಳುವುದು ಸಮುಚಿತ. ದಾರಿಯಲ್ಲಿ ಯಾವುದೇ ಆಪತ್ತು ಬಾರದಂತೆ ಅವನು ರಕ್ಷಿಸಬೇಕಲ್ಲದೆ, 'ದೃಷ್ಟಿಪೂತಂ ನ್ಯಸೇತ್ ಪಾದಂ' –ಚೆನ್ನಾಗಿ ದೃಷ್ಟಿ ಹರಿಸಿ ದಾರಿಯಲ್ಲಿ ತುಳಿಯಬಾರದದ್ದು ಏನೂ ಇಲ್ಲ–ಎಂದು ನಿರ್ಧರಿಸಿಕೊಂಡು ಹೆಜ್ಜೆಗಳನ್ನಿಡಬೇಕು–ಎಂದು ಸಂದೇಶಿಸುವ ಭಾಗವತದ ಸಂದೇಶವನ್ನು ಉಲ್ಲಂಘಿಸಿ ತುಳಿಯಬಾರದ್ದನ್ನು ತುಳಿಯುವ ಪ್ರಯುಕ್ತ ಸಂಭವಿಸಬಹುದಾದ ಪಾಪದಿಂದಲೂ ವರಾಹ ರಕ್ಷಣೆ ನೀಡಬೇಕು.

ದಾರಿಯಲ್ಲಿ ಸಂಚರಿಸುವಾಗ ಶ್ರೇಷ್ಠರಾದ ತನ್ನ ಭಕ್ತರನ್ನು ಬಿಡದೆ,[1] ಅವರ ಜೊತೆಗೇ ಇದ್ದು, ಅವರು ಯಾವುದೇ ಆಪತ್ತಿಗೆ ಒಳಗಾಗದಂತೆ, ಅಧಿಕ ಪಾಪ ಸಂಭವಿಸದಂತೆ ರಕ್ಷಿಸುತ್ತಿರುವುದರಿಂದಲೇ 'ವರಾಹ' ಎನಿಸಿರುವವನು ಅವನು.

**ಪರಶುರಾಮನಿಂದ ಪರ್ವತಶಿಖರಗಳಲ್ಲಿ ರಕ್ಷಣೆ:**

ಪರಶುರಾಮ ಈಗಲೂ ಮಹೇಂದ್ರ ಪರ್ವತದಲ್ಲಿ ಸಿದ್ಧ, ಚಾರಣ, ಗಂಧರ್ವರಿಂದ ಸೇವಿಸಲ್ಪಡುತ್ತ ಇರುವ ಪ್ರಯುಕ್ತ[2] ಅಂತಹ ಪರಶುರಾಮನಿಂದ[3] ಪರ್ವತ ಶಿಖರಗಳಲ್ಲಿ ಒದಗುವ ಆಪತ್ತುಗಳಿಂದ ರಕ್ಷಣೆಯನ್ನು ನೀಡಲು ಪ್ರಾರ್ಥಿಸಲಾಗಿದೆ.

ಭಕ್ತರಿಗೆ ಸಂಭವಿಸುವ ಆಪತ್ತುಗಳನ್ನು ಕೊಡಲಿಯ ಮೂಲಕ ಪರಿಹರಿಸುವುದರಿಂದಲೇ ಪರಶುರಾಮ ಎಂದೆನಿಸಿರುವವನು ಅವನು.[4]

**ರಾಮಚಂದ್ರನಿಂದ ದೇಶಾಂತರದಲ್ಲಿ ನೆಲೆಸುವಾಗ ರಕ್ಷಣೆ:**

ಶ್ರೀರಾಮಚಂದ್ರ ತನ್ನ ಜನ್ಮಭೂಮಿಯಾದ ಅಯೋಧ್ಯೆಯನ್ನು ಬಿಟ್ಟು

---

1 ವರಾನ್ ಶ್ರೇಷ್ಠಾನ್ ಸ್ವಭಕ್ತಾನ್ ನ ಜಹಾತಿ ಅಧ್ವನ್ಯಪೀತಿ ವರಾಹಃ ।

2 ಆಸ್ತೇಽದ್ಯಾಽಪಿ ಮಹೇಂದ್ರಾದ್ರೌ ನ್ಯಸ್ತದಂಡಃ ಪ್ರಶಾಂತಧೀಃ ।
ಉಪಗೀಯಮಾನಚರಿತಃ ಸಿದ್ಧಗಂಧರ್ವಚಾರಣೈಃ । — ಭಾಗ. 9–16–26

3 ಸ ರಾಮಃ ಪರಶುರಾಮೋಽದ್ರಿಕೂಟೇಷು ಮಾಹೇಂದ್ರಸದ್ಮತ್ವಾತ್ತಸ್ಯ — ಸತ್ಯ

4 ಪರಶುನಾ ಮಾರಯತೀತಿ ಪರಶುರಾಮಃ ।

ಅರಣ್ಯಗಳಲ್ಲಿ ಅಲೆದಾಡಿದವನು. ಅಂತಹ ಶ್ರೀರಾಮನಿಂದ ಜನ್ಮಭೂಮಿಯನ್ನು ಬಿಟ್ಟು ದೇಶಾಂತರದಲ್ಲಿ ನೆಲೆಸುವ ಸಂದರ್ಭ ಒದಗಿದಾಗ ಸಂಭವಿಸಬಹುದಾದ ಆಪತ್ತುಗಳಿಂದ ರಕ್ಷಣೆ ನೀಡಲು ಬೇಡಿಕೊಂಡಿರುವುದು ಸಮುಚಿತವಾದುದು.

ಹೀಗೆ ಆ ಸಂದರ್ಭದಲ್ಲಿ ಯಾವುದೇ ಆಪತ್ತು ಬರದಂತೆ ರಕ್ಷಣೆ ನೀಡ ಬೇಕಲ್ಲದೆ, ಆ ಸಂದರ್ಭದಲ್ಲಿ ಜನ್ಮಭೂಮಿಯಲ್ಲಿ ನಡೆಸಬಹುದಾದಷ್ಟು ಸಾಧನಾನು ಷ್ಠಾನವನ್ನು ಪಾಲಿಸಲು ಆಗದಿದ್ದಲ್ಲಿ ಆ ಪ್ರಯುಕ್ತ ಸಂಭವಿಸಬಹುದಾದ ಪಾಪ ಗಳಿಂದಲೂ ಅವನು ರಕ್ಷಣೆಯನ್ನು ನೀಡಬೇಕು.

ಭಕ್ತರ ಆಪತ್ತುಗಳ ಭಯವನ್ನು ಪರಿಹರಿಸುವುದರಿಂದಲೇ 'ರಾಮ' ಎಂದೆನಿ ಸಿರುವವನು ಭಗವಂತನು.[1]

## ಪ್ರಮಾದಗಳ ವಿಷಯದಲ್ಲಿ ನಾರಾಯಣನಿಂದ ರಕ್ಷಣೆ:

ಭಗವಂತನನ್ನು ಮರೆತುಬಿಡುವುದು, ತತ್ತ್ವಗಳನ್ನು ಅನ್ಯಥಾ ತಿಳಿಯುವುದು, ಶಾಸ್ತ್ರಾಭ್ಯಾಸವನ್ನು ನಡೆಸದಿರುವುದು, ಶಾಸ್ತ್ರನಿಷಿದ್ಧ ಕರ್ಮಗಳನ್ನೆಸಗುವುದು, ಹಾಗೂ ಶಾಸ್ತ್ರವಿಹಿತಕರ್ಮಗಳನ್ನು ಆಚರಿಸದಿರುವುದು–ಹೀಗೆ ಈ ಐದು ಬಗೆಯ ಪ್ರಮಾದ[2] ನಮ್ಮಿಂದ ನಡೆಯದಂತೆ ಯಮಧರ್ಮನ ಪುತ್ರನಾಗಿ ಅವತರಿಸಿರುವ ನಾರಾಯಣನು ಕಾಪಾಡಬೇಕು. ಒಂದು ವೇಳೆ, ನಮ್ಮ ಪ್ರಾರಬ್ಧ ಕರ್ಮಕ್ಕನು ಗುಣವಾಗಿ ಪ್ರಮಾದ ನಡೆದು ಹೋದರೆ ಅದರಿಂದ ಸಂಭವಿಸಬಹುದಾದ ಪಾಪ ದಿಂದಲೂ ರಕ್ಷಿಸಬೇಕು.

ಮೋಕ್ಷಸಾಧನೆಗೆ ಉಪಯುಕ್ತವಾಗುವ ನಿವೃತ್ತಕರ್ಮಗಳ ಶಿಕ್ಷಣವನ್ನು ಸಾತ್ತ್ವಿಕರಿಗೆ ನೀಡುತ್ತ, ತಪಸ್ಸನ್ನಾಚರಿಸುತ್ತಿರುವ[3] ನಾರಾಯಣನು ತನ್ನ ತಪಸ್ಸಿನ ವಿಘ್ನಗಳನ್ನೊಡ್ಡುವುದಕ್ಕಾಗಿ ದೇವೇಂದ್ರ ಕಳುಹಿಸಿದ ಕಾಮನ ಸೇನೆಯ ಆಕ್ರಮಣ ದಿಂದ ಸ್ವಲ್ಪವೂ ವಿಚಲಿತನಾಗದವನು. ಅವನ ಈ ವ್ಯಕ್ತಿತ್ವವನ್ನು ಉಲ್ಲೇಖಿಸಿ

---

1 ಭಕ್ತಾನಾಂ ಆಪದ್ಭ್ಯಃ ಭಯಂ, 'ರಂ ಕ್ಲೀಬೇ....ಭಯೇ....' ತತ್ ಆಮಯತಿ ನಾಶಯತೀತಿ ರಾಮಃ, 'ಅಮ ಪೀಡಾಯಾಮ್'

2 'ಅವಿಸ್ಮೃತಿಃ ಸದಾ ವಿಷ್ಣೋರನ್ಯಥಾಜ್ಞಾನವರ್ಜನಮ್ ।
ಶಾಸ್ತ್ರಾಭ್ಯಾಸಃ ಸದೋದ್ಯೋಗಾಚ್ಛ್ರವಣಾಚ್ಚ ವಿಚಾರತಃ ।
ನಿಷಿದ್ಧಕರ್ಮಣಾಂ ತ್ಯಾಗಃ ಸ್ವಧರ್ಮಸ್ಯ ಕೃತಿಃ ಸದಾ ।
ಅಪ್ರಮಾದ ಇತಿ ಪ್ರೋಕ್ತಃ....' ಇತಿ ಛಾಂದೋಗ್ಯೋಪನಿಷದ್ಭಾಷ್ಯೇ (2-2) ಪ್ರದರ್ಶಿತೇನ ಅಪ್ರಮಾದಸ್ವರೂಪೇಣ ಪ್ರಮಾದಸ್ವರೂಪಂ ಸೂಚಿತಂ ಭವತಿ ।

3 ನೈಷ್ಕರ್ಮ್ಯಲಕ್ಷಣಮುವಾಚ ಚಚಾರ ಕರ್ಮ ಯೋಽದ್ಯಾಪಿ ಚಾಸ್ತ ಋಷಿವರ್ಯನಿಷೇವಿತಾಂಘ್ರಿಃ ॥ –ಭಾಗ. 11-4-6

ಸ್ತುತಿಸುವ ಭಕ್ತರೂ ಸನ್ಮಾರ್ಗದಿಂದ ವಿಚಲಿತರಾಗಿ ಪ್ರಮಾದಕ್ಕೊಳಗಾಗದಂತೆ ಅನುಗ್ರಹಿಸುವನು.[1]

ಅಲ್ಲದೆ, ಸ್ವಧರ್ಮದಿಂದ ಹಿಂಜರಿದು, ಪರಧರ್ಮವನ್ನು ಅವಲಂಬಿಸುವ "ಪ್ರಮಾದ"ಕ್ಕೆ ಹೊರಟ ಅರ್ಜುನನನ್ನು ಅಂತಹ ಪ್ರಮಾದದಿಂದ ಪಾರುಮಾಡಿದ ಶ್ರೀಕೃಷ್ಣ ನಾರಾಯಣನದ್ದೇ ರೂಪವೆನಿಸಿದ್ದು,[2] ಅರ್ಜುನನಂತಹ ಸಾಧಕರನ್ನು ಪ್ರಮಾದದಿಂದ ರಕ್ಷಿಸಿದ ಅವನಲ್ಲಿ ಪ್ರಮಾದದಿಂದ ರಕ್ಷಣೆ ನೀಡಲು ಕೇಳಿಕೊಳ್ಳು ವುದು ಔಚಿತ್ಯಪೂರ್ಣ.

ತಾನು ಯಾವುದೇ ಬಗೆಯ ಪ್ರಮಾದ ಮುಂತಾದ ದೋಷಗಳಿಗೆ ಆಶ್ರಯ ನಾಗದೆ ಇರುವುದರಿಂದ "ನಾರಾಯಣ" — ಎನಿಸಿರುವ[3] ಭಗವಂತನು ಭಕ್ತರ ಪ್ರಮಾದಗಳ ಪರಿಹಾರಕವಾದ ಸಮೀಚೀನ ಜ್ಞಾನಕ್ಕೆ ಆಧಾರನಾಗಿರುವುದರಿಂದಲೂ 'ನಾರಾಯಣ' ಎನಿಸಿದ್ದು,[4] ಅಂತಹ ಜ್ಞಾನವನ್ನು ಭಕ್ತರಿಗೆ ಕರುಣಿಸಿ ಅವರು ಪ್ರಮಾದಕ್ಕೊಳಗಾಗದಂತೆ ರಕ್ಷಿಸುತ್ತಿರುವನು.

### ಅಪಹಾಸದ ಅಥವಾ ಅಹಂಕಾರದ ವಿಷಯದಲ್ಲಿ ನರನಿಂದ ರಕ್ಷಣೆ:

ಯಾರದ್ದೋ ಅಪಹಾಸನಕ್ಕೆ ಬಲಿಯಾಗುವ ಶೋಚನೀಯ ಪರಿಸ್ಥಿತಿ ನಮಗೆ ಒದಗಬಹುದು. ಅಥವಾ ಅಪಹಾಸಕ್ಕೆ ಅನರ್ಹಗಳಾದ ವ್ಯಕ್ತಿಗಳನ್ನೋ, ವಸ್ತುಗಳನ್ನೋ ಕ್ಷೇತ್ರಗಳನ್ನೋ, ಅಪಹಾಸಗೈಯುವ ಮೂಲಕ ಅಪಚಾರವನ್ನೆಸಗುವ ದುಃಸ್ಥಿತಿ ನಮ್ಮದ್ದಾಗಬಹುದು. ಈ ಎರಡು ಸಂದರ್ಭಗಳಲ್ಲೂ "ನರ" ನಮಗೆ ರಕ್ಷಣೆ ನೀಡಬೇಕು. ನಾವು ಯಾರ ಅಪಹಾಸಕ್ಕೂ ಗುರಿಯಾಗದಂತೆ ಕಾಪಾಡಬೇಕಲ್ಲದೆ, ಹಾಸ್ಯಕ್ಕೆ ಯೋಗ್ಯರಲ್ಲದವರ ಕುರಿತು ಹಾಸ್ಯ ಮಾಡುವ ದುರ್ಬುದ್ಧಿ ನಮಗೆ ಬಾರದಂತೆ ರಕ್ಷಿಸಬೇಕು.

---

1 'ನೈತದ್ ವಿಭೋ ತ್ವಯಿ ಪರೇsವಿಕೃತೇ ವಿಚಿತ್ರಂ ಸ್ವಾರಾಮಧೀರನಿಕರಾನತ- ಪಾದಪದ್ಮೇ ತ್ವಾಂ ಸೇವತಾಂ ಸುರಕೃತಾ ಬಹವೋsಂತರಾಯಾಃ ಸ್ವೌಕೋ- ವಿಲಂಘ್ಯ ಪರಮಂ ವ್ರಜತಾಂ ಪದಂ ತೇ' ಇತಿ ಕಾಮಕೃತೇನ ನಾರಾಯಣವಿಷ- ಯಕೇಣ ಪ್ರಾರ್ಥನೇನ ನಾರಾಯಣಸ್ಯ ತದನುಗ್ರಹಭಾಜಾಂ ತದ್ಭಕ್ತಾನಾಂ ಚ ಪ್ರಮಾದಾಭಾವ: ಸೂಚಿತೋ ಭವತಿ ।

2 ತಾವಿಮೌ ವೈ ಭಗವತೋ ಹರೇರಂಶಾವಿಹಾಗತೌ । ಭಾರವ್ಯಯಾಯ ಚ ಭುವಃ ಕೃಷ್ಣೌ ಯದುಕುರೂದ್ವಹೌ । —ಭಾಗ. 4-1-59

3 ಅರಾಃ ಪ್ರಮಾದಾದಯೋ ದೋಷಾಃ, ತಾದೃಶಾರಾಯಣೋ ನ ಭವತೀತಿ ನಾರಾಯಣಃ ।

4 ನರಾ...ಾವಿದಂ ನಾರಂ ಜ್ಞಾನಮ್, ತದಾಶ್ರಯತ್ವಾತ್ ನಾರಾಯಣಃ ।

ಅಥವಾ ಯಾರದ್ದೋ ಅಹಂಕಾರಕ್ಕೆ ನಾವು ಗುರಿಯಾಗದಂತೆ ಹಾಗೂ ನಾವು ಅಹಂಕಾರವನ್ನು ತೋರಿಸದಂತೆ ನರ ನಮಗೆ ರಕ್ಷಣೆ ನೀಡಬೇಕು.

'ದಂಭೋದ್ಭವ'—ಎಂಬ ಸಾರ್ವಭೌಮನ ಅಹಂಕಾರವನ್ನು ಪರಿಹರಿಸಿದವನು ನರನು. ತನಗೆ ಸಮಾನರಾಗಲೀ, ತನಗಿಂತ ವಿಶಿಷ್ಟರಾಗಲೀ ಯಾರೂ ಇಲ್ಲ ಎಂದು "ದರ್ಪ"ಕ್ಕೊಳಗಾಗಿದ್ದ ದಂಭೋದ್ಭವ ಬ್ರಾಹ್ಮಣರ ಸೂಚನೆಯ ಮೇರೆಗೆ ನರನಾರಾಯಣರಲ್ಲಿಗೆ ಕಾದಾಡಲು ಹೋಗುವನು. ನರನು ಬಾಣಗಳ ಪ್ರಯೋಗದಿಂದ ದಂಭೋದ್ಭವ ಶರಣಾಗತನಾಗುವಂತೆ ಮಾಡುವನು. ಮುಂದೆ ದರ್ಪದಿಂದ ಕೂಡಿದವನಾಗಿ ಯಾರನ್ನೂ ಧಿಕ್ಕರಿಸಬಾರದೆಂದು "ದಂಭೋದ್ಭವ"ನಿಗೆ ಎಚ್ಚರ ನೀಡುವನು.[1] ಹೀಗೆ ದಂಭೋದ್ಭವನ ದರ್ಪವನ್ನು ಶಮನ ಮಾಡಿರುವ ನರನಲ್ಲಿ ನಮಗೂ ಅಹಂಕಾರ ಬಾರದಂತೆ ರಕ್ಷಣೆಯನ್ನು ಕೇಳಿಕೊಳ್ಳುವುದು ಔಚಿತ್ಯಪೂರ್ಣವೆನಿಸುವುದು.

ಯಮಧರ್ಮ ಮತ್ತು ಮೂರ್ತಿದೇವಿಯರಲ್ಲಿ ಅವತರಿಸಿದ ನಾಲ್ಕು ಪುತ್ರರಲ್ಲಿ ಒಬ್ಬನಾದ 'ನರ'ನಲ್ಲಿ ನರನಾಮಕ ಭಗವಂತನ ವಿಶೇಷಾವೇಶ.[2] ನರನಲ್ಲಿ ಆವೇಶಗೊಂಡ ಭಗವಂತನ ನರನಾಮಕ ರೂಪದಲ್ಲಿ[3] ಈ ಪ್ರಾರ್ಥನೆ.

ಅಪಹಾಸಕ್ಕೊಳಗಾಗುವ ಅಥವಾ ಅಹಂಕಾರಕ್ಕೊಳಗಾಗುವ ಭಕ್ತರ ದುಃಸ್ಥಿತಿಯನ್ನು ಹೋಗಲಾಡಿಸುವವನು ಹಾಗೆಯೇ ಅವರಿಗೆ ಒಳ್ಳೆಯ ವಿವೇಕವನ್ನು ಕೊಟ್ಟು ಯೋಗ್ಯರನ್ನು ಅಪಹಾಸ ಮಾಡದಂತೆ, ಯೋಗ್ಯರೆದುರು ಅಹಂಕಾರವನ್ನು ತೋರಿಸದಂತೆ ರಕ್ಷಣೆ ನೀಡುವವನು—ಎಂಬ ಅಭಿಪ್ರಾಯದಲ್ಲಿಯೇ "ನರ" ಎಂದೆನಿಸುವವನು ಅವನು.[4]

---

1 ಮಾ ಚ ದರ್ಪಸಮಾವಿಷ್ಟಃ ಕ್ಷೇಪ್ಸೀಃ ಕಾಂಶ್ಚಿತ್ ಕಥಂಚನ ।
ಅಲ್ಪೀಯಾಂಸಂ ವಿಶಿಷ್ಟಂ ವಾ ತತ್ ತೇ ರಾಜನ್ ಸಮಾಹಿತಮ್ ॥
—ಮ. ಭಾರ. ಉದ್ಯೋಗ 96–35

2 ಅನಂತೋ ನರನಾಮಾತ್ರ ತಸ್ಮಿಂಸ್ತು ನರನಾಮವಾನ್ ।
ವಿಶೇಷೇಣ ಸ್ವಯಂ ವಿಷ್ಣುರ್ನಿವಸತ್ಯಂಬುಜೇಕ್ಷಣಃ ॥
—ಪಾದ್ಮ (ಭಾಗ. ತಾ. ನಿ. 2–7–6)

3 ಜಹ್ನುರ್ನಾರಾಯಣೋ ನರಃ....' ಇತಿ ಸಹಸ್ರನಾಮಸು 'ನಾರಾಯಣೋ ನರಃ ಶೌರಿಃ' ಇತಿ ನಾರಾಯಣಾಷ್ಟೋತ್ತರಶತನಾಮಸ್ತೋತ್ರೇ ಚ ಅಸ್ಯೈವ ಉಲ್ಲೇಖಃ ಕೃತಃ ।

4 ನರತಿ ಅಪಹಾಸಾಸ್ಪದಂ ಅಹಂಕಾರಾಸ್ಪದಂ ವಾ ದುಃಸ್ಥಿತಿಂ ನಯತಿ ಅಪನಯತಿ ಯೋಗ್ಯಾನ್ ಯಥಾ ನ ಅಪಹಸೇಯುಸ್ತಥಾ ಅಹಂಕಾರಾವಿಷ್ಟಾ ನ ಭವೇ–ಯುಸ್ತಥಾ ವಿವೇಕಂ ಆನಯತಿ ಇತಿ ವಾ ನರಃ 'ನೃ ನಯೇ'

## ಯೋಗದ ವಿಷಯದಲ್ಲಿ ದತ್ತಾತ್ರೇಯನು ರಕ್ಷಿಸಲಿ:

ಮೋಕ್ಷಕ್ಕೆ ಉಪಾಯಗಳಾದ ಚಿತ್ತನಿರೋಧ, ಜ್ಞಾನ, ಭಕ್ತಿ ಮುಂತಾದವು 'ಯೋಗ' ಎನಿಸುವವು.[1] ಇವುಗಳನ್ನು ಸರಿಯಾಗಿ ಪಡೆದುಕೊಳ್ಳದೆ ಇರುವಿಕೆಯಿಂದ ದತ್ತಾತ್ರೇಯನು ಕಾಪಾಡಬೇಕು. ಅಂದರೆ ಅವುಗಳ ಪ್ರಾಶಸ್ತ್ಯವನು ಕ್ರಮವಾಗಿ ವಿವೇಚಿಸಿಕೊಂಡು, ಅವುಗಳನ್ನು ಅಳವಡಿಸಿಕೊಳ್ಳುವಂತೆ ಅನುಗ್ರಹಿಸಬೇಕು. ಹಾಗೆಯೇ ಅಂತಹ ಯೋಗಗಳಿಗೆ ವಿರುದ್ಧಗಳಾದ ಕಾಮಾದಿದೋಷಗಳಿಂದ ರಕ್ಷಿಸಬೇಕು.

ಯದು, ಕಾರ್ತವೀರ್ಯಾರ್ಜುನ ಮುಂತಾದವರು ದತ್ತನ ಪಾದಾರವಿಂದವನ್ನು ಸೇವಿಸಿ ಯೋಗಸಿದ್ಧಿಯನ್ನು ಪಡೆದಿರುವರು.[2] ಅಂತಹ ದತ್ತನಲ್ಲಿ ಯೋಗದ ಬಗ್ಗೆ ಜಾಗೃತಿಯನ್ನುಂಟುಮಾಡಲು ಪ್ರಾರ್ಥಿಸುವುದು ಸಮುಚಿತ.

ಅತ್ರಿಯ ಭಕ್ತಿಗೆ ಒಲಿದು ತನ್ನನ್ನೇ ಪುತ್ರನನ್ನಾಗಿ ದಾನ ಮಾಡಿ 'ದತ್ತ ಎನಿಸಿರುವ ಭಗವಂತನು ಭಕ್ತರಿಗೆ ಅಂತಹ ಭಕ್ತಿ, ಭಕ್ತಿಗೆ ಸಾಧನಗಳಾದ ಜ್ಞಾನಾದಿ ರೂಪಗಳಾದ ಯೋಗಗಳನ್ನು ಅನುಗ್ರಹಿಸದೆ ಇರಲಾರನು.[4]

## ಕರ್ಮಬಂಧನಕ್ಕೆ ಸಿಲುಕದಂತೆ ಕಪಿಲನಿಂದ ರಕ್ಷಣೆ:

ಭಗವಂತನ ಪ್ರೀತಿಯ ಉದ್ದೇಶವನ್ನು ಹೊರತಾಗಿ ನಡೆಸುವ ಕರ್ಮಗಳೆಲ್ಲ ಬಂಧಕಗಳಾಗುವವು.[5] ಹೀಗೆ ಬಂಧಿಸುವ ಸ್ವಭಾವದ ಕರ್ಮ ಬಂಧಕವಾಗದೆ

---

1 ಜ್ಞಾನಂ ಚ ಯೋಗಶಬ್ದೋಕ್ತಂ ಯುಜ್ಯತೇऽನೇನ ಯತ್ಸುಖಮ್ ।
ಕ್ವಚಿದ್ ಯೋಗ ಉಪಾಯಃ ಸ್ಯಾತ್ ಕ್ವಚಿಚ್ಚಿತ್ತನಿರೋಧನಮ್ ।
—ದತ್ತಾತ್ರೇಯಯೋಗ (ಭಾಗ. ತಾ. ನಿ. 11-7-14)

2 'ಯತ್ಪಾದಪಂಕಜಪರಾಗಪವಿತ್ರದೇಹಾ ಯೋಗರ್ದ್ಧಿಮಾಪುರುಭಯೀಂ ಯದುಹೈಹಯಾದ್ಯಾಃ' —ಭಾಗ. 2-7-4

3 'ಅತ್ರೇರಪತ್ಯಮಭಿಕಾಂಕ್ಷತ ಆಹ ತುಷ್ಟೋ ದತ್ತೋ ಮಯಾಹಮಿತಿ ಯದ್ ಭಗವಾನ್ ಸ ದತ್ತಃ । —ಭಾಗ. 2-7-4

4 ದತ್ತಂ ಭಕ್ತೇಭ್ಯಃ ಭಕ್ತ್ಯಾದಿಯೋಗಾನಾಂ ದಾನಂ ಅಸ್ಯಾಸ್ತೀತಿ ಅರ್ಶ ಆದ್ಯಜಿದತ್ತಃ.

5 ಯಜ್ಞಾರ್ಥಾತ್ ಕರ್ಮಣೋऽನ್ಯತ್ರ ಲೋಕೋऽಯಂ ಕರ್ಮಬಂಧನಃ
—ಗೀ. 3-9

ಮೋಚಕವೇ ಆಗಬೇಕೆಂದರೆ ಅದಕ್ಕೆ ಭಗವಂತನ ಸಂಬಂಧವನ್ನು ಹಚ್ಚಬೇಕು.[1] ವೈದಿಕಸಾಂಖ್ಯಶಾಸ್ತ್ರವನ್ನು ಉಪದೇಶಿಸಿದ ಕಪಿಲವಾಸುದೇವನು[2] ನೀಡಿದ 'ಶುದ್ಧಾತ್ಮ ತತ್ತ್ವಜ್ಞಾನ' ರೂಪವಾದ ಸಾಂಖ್ಯವನ್ನು[3] ಅಳವಡಿಸಿಕೊಳ್ಳುವುದರ ಮೂಲಕ ಕರ್ಮಗಳನ್ನು ಭಗವಂತನಿಗೆ ಸಮರ್ಪಿಸಬಹುದಾಗಿದೆ.

ಹೀಗೆ ಸಾಂಖ್ಯವನ್ನು ಉಪದೇಶಿಸುವುದರ ಮೂಲಕ ಕರ್ಮಬಂಧನಕ್ಕೆ ಸಿಲುಕದಂತೆ ಬ್ರಹ್ಮಾದಿಗಳನ್ನೂ, ಭೃಗ್ವಾದಿಗಳನ್ನೂ, ಆಸುರಿಯನ್ನೂ ಅನುಗ್ರಹಿಸಿರುವ ಕಪಿಲನಲ್ಲಿ ಕರ್ಮಬಂಧನಕ್ಕೆ ಸಿಕ್ಕಿಹಾಕಿಕೊಳ್ಳದಂತೆ ಕರ್ಮಗಳನ್ನು ಆಚರಿಸುವ ನಿಟ್ಟಿನಲ್ಲಿ ಒಳ್ಳೆಯ ಜಾಗೃತಿಯನ್ನು ನೀಡಿ ರಕ್ಷಿಸಲು ಕೇಳಿಕೊಳ್ಳುವುದು ಸಮುಚಿತವಾದುದು.

ಕರ್ಮಗಳು ಬಂಧಕಗಳಾಗದಂತೆ ಮಾಡುವ ಮೂಲಕ ಸಂಸಾರಬಂಧನದಿಂದ ಬಿಡುಗಡೆಗೊಳಿಸಿ, ಭಕ್ತರ ಸ್ವರೂಪಸುಖವನ್ನು ಉಣ್ಣಿಸುವ ಆ ಮೂಲಕ ಅವರನ್ನು ಲಾಲಿಸುವ ಪ್ರಯುಕ್ತ 'ಕಪಿಲ' ಎನಿಸಿರುವವನು ಭಗವಂತ.[4]

**ಆಯೋಗ್ಯಕಾಮದ ವಿಷಯದಲ್ಲಿ ಸನತ್ಕುಮಾರನಿಂದ ರಕ್ಷಣೆ :**

ಸನತ್ಕುಮಾರನಾಮಕ ಭಗವಂತನು ಬ್ರಹ್ಮಚರ್ಯವನ್ನು ಸ್ವಯಂ ಪಾಲಿಸಿದವನು. ಚತುರ್ಮುಖನಿಗೆ ವೇದವನ್ನು ಉಪದೇಶಿಸಿದವನು. ಸನತ್ಕುಮಾರ ಎನಿಸುವ ಚತುರ್ಮುಖನ ಮಾನಸ ಪುತ್ರನಲ್ಲಿ ಆವೇಶಗೊಂಡಿರುವವನು. ಅವನಿಗೆ ಬ್ರಹ್ಮಚರ್ಯ ಪಾಲನೆ ಮಾಡಲು ಅನುಗ್ರಹಿಸಿದನು. ಸ್ಥಾಣು ಎನಿಸಿರುವ ರುದ್ರನಿಗೆ ವಿಷಯಪದಾರ್ಥಗಳಿಗೆ ಸ್ಪಂದಿಸದೆ ಇರುವ ಸ್ಥಾಣುತ್ವವನ್ನು ಅನುಗ್ರಹಿಸಿದ

---

1 ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ ।
ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ । —ಗೀ. 5-10

2 ಕಪಿಲೋ ವಾಸುದೇವಾಖ್ಯಸ್ತಂತ್ರಸಾಂಖ್ಯಂ ಜಗಾದ ಹ । ಬ್ರಹ್ಮಾದಿಭ್ಯಶ್ಚ ದೇವೇಭ್ಯೋ ಭೃಗ್ವಾದಿಭ್ಯಸ್ತಥೈವ ಚ ತಥೈವಾಸುರಯೇ ಸರ್ವವೇದಾರ್ಥೈರುಪ-ಬೃಂಹಿತಮ್ —ಪಾದ್ಮ (ಭಾಗ. 1-3-10)

3 ಶುದ್ಧಾತ್ಮತತ್ತ್ವವಿಜ್ಞಾನಂ ಸಾಂಖ್ಯಮಿತ್ಯಭಿಧೀಯತೇ'
—ವ್ಯಾಸಸ್ಮೃತಿ (ಗೀ. ತಾ. 2-39)

4 ಕಂ ಸ್ವರೂಪಾತ್ಮಕಂ ಸುಖಮ್, 'ನೀಳಂ ಸುಖಂ ಕ ಇತ್ಯುಕ್ತಃ....' (ಬೃ. ಉ. ಭಾ. 5-7-1) ತತ್ ಸ್ವಭಕ್ತಾನ್ ಪಾಯಯತಿ, ಲಾಲಯತಿ ಚೇತಿ ಕಪಿಲಃ ।

ವನು.[1] ಇಂತಹವನಲ್ಲಿ ಅಯೋಗ್ಯಕಾಮನೆಗಳು ಮೂಡದಂತೆ ರಕ್ಷಿಸಲು ಹಾಗೂ ಒಂದು ವೇಳೆ ಪ್ರಾರಬ್ಧಕರ್ಮಕ್ಕನುಗುಣವಾಗಿ ಅಯೋಗ್ಯಕಾಮನೆಗೊಳಗಾಗಿ ಪಾಪಕರ್ಮಗಳನ್ನು ಎಸಗಿದಲ್ಲಿ, ಅಂತಹ ಪಾಪಕರ್ಮಗಳಿಂದ ಸಂಭವಿಸಬಹುದಾದ ಪಾಪಗಳಿಂದ ರಕ್ಷಿಸಲು ಕೇಳಿಕೊಳ್ಳುವುದು[2] ತುಂಬ ಔಚಿತ್ಯಪೂರ್ಣ.

ಯಾವಾಗಲೂ ಭಕ್ತರ ಕುತ್ಸಿತಗಳಾದ ಕಾಮನೆಗಳನ್ನು ಪರಿಹರಿಸುವ ಪ್ರಯುಕ್ತ "ಸನತ್ಕುಮಾರ" — ಎಂದೆನಿಸಿರುವವನು ಅವನು.[3]

## ದಾರಿಯಲ್ಲಿ ಎಸಗುವ ದೇವತಾವಮಾನದ ವಿಷಯದಲ್ಲಿ ಹಯಗ್ರೀವನಿಂದ ರಕ್ಷಣೆ:

ದಾರಿಯಲ್ಲಿ ಸಂಚರಿಸುವಾಗ ಭಗವಂತನ ಸನ್ನಿಧಾನವಿಶೇಷಕ್ಕೆ ಪಾತ್ರರಾದ ಗುರುಗಳು, ಬ್ರಾಹ್ಮಣರು, ಗೋವುಗಳು ಕಾಣಸಿಗಬಹುದು. ಅಲ್ಲದೆ, ಅಲ್ಲಲ್ಲಿ ಬೇರೆ ಬೇರೆ ದೇವತೆಗಳ ಮಂದಿರಗಳು ಸಿಗಬಹುದು. ಆಗ ಅವರಿಗೆಲ್ಲ ಯೋಗ್ಯ ಗೌರವವನ್ನು ಸಲ್ಲಿಸಿ ಮುಂದುವರಿಯಬೇಕು. ಆದರೆ ಅಜ್ಞಾನದಿಂದಾಗಲೀ, ಅನಾದರದಿಂದಾಗಲೀ ಅವರನ್ನು ಗಮನಿಸದೇನೋ ಮುಂದುವರಿದಲ್ಲಿ ಅವರಿಗೆ ಅವಮಾನಿಸಿದಂತಾಗುವುದು. ಈ ಪ್ರಯುಕ್ತ ಸಂಭವಿಸಬಹುದಾದ ಪಾಪದಿಂದ ಹಯಗ್ರೀವ ಪಾರುಮಾಡಬೇಕು. ಇಂತಹ ಅಪರಾಧಗಳು ನಡೆಯದಂತೆ ಬೇಕಾದ ಜಾಗೃತಿಯನ್ನು ನೀಡುವುದರ ಮೂಲಕ ರಕ್ಷಿಸಬೇಕು. ಪ್ರಾರಬ್ಧಕರ್ಮಕ್ಕನುಗುಣವಾಗಿ, ಇಂತಹ ಅಪರಾಧಗಳು ಎಸಗಲ್ಪಟ್ಟವೆಂದರೆ, ಅವುಗಳಿಂದ ಸಂಭವಿಸುವ ಪಾಪ ಹೆಚ್ಚು ಪ್ರಭಾವಕಾರಿಯಾಗದಂತೆ ಮಾಡುವುದರ ಮೂಲಕವೂ ರಕ್ಷಿಸಬೇಕು.

ಪ್ರಯಾಣಕ್ಕೆ ವಿಶೇಷವಾಗಿ ಬಳಸಲಾಗುತ್ತಿದ್ದ ವಾಹನ ಎಂದರೆ ಅಶ್ವ. ಅಶ್ವಾರೂಢನಾಗಿ ಸಂಚರಿಸುವಾಗ ದಾರಿಯಲ್ಲಿ ನಡೆಸಬಹುದಾದ ದೇವಾವಮಾನದಿಂದ

---

1 ಕುಮಾರೋ ನಾಮ ಭಗವಾನ್ ಸ್ವಯಂ ಸ್ವಸ್ಮಾದಜಾಯತ । ದಿದೇಶ ಬ್ರಹ್ಮಣೇ ಬ್ರಹ್ಮ ಬ್ರಹ್ಮಚರ್ಯೇ ಸ್ಥಿತೋ ವಿಭುಃ । ಯಸ್ಮಾತ್ ಸನತ್ಕುಮಾರಶ್ಚ ಬ್ರಹ್ಮಚರ್ಯಮಪಾಲಯತ್ । ಯಃ ಸ್ಥಾಣೋಃ ಸ್ಥಾಣುತಾಂ ಪ್ರಾದಾದ್ ಭಗವಾನವ್ಯಯೋ ಹರಿಃ' —ಬ್ರಾಹ್ಮೇ (ಭಾ. ತಾ. ನಿ. 1–3–6)

* ಸನತ್ಕುಮಾರನಾಮಾ ತು ಬ್ರಹ್ಮಚರ್ಯವಪುರ್ಹರಿಃ । ಸನತ್ಕುಮಾರಮಪರಂ ಬ್ರಹ್ಮಪುತ್ರಂ ವಿವೇಶ ಯಃ —ಭಾಗ. ತಾ. ನಿ. 6–8–17

2 ಸ ಮಾಂ ಯೋಗ್ಯೇತರಾತ್ ಕಾಮಾತ್ ಪಾತು ವಿಶ್ವೇಶ್ವರಃ ಪ್ರಭುಃ —ಭಾಗ. ತಾ. ನಿ. 6–8–17

3 ಸನತ್ ನಿತ್ಯಂ ಕು ಕುತ್ಸಿತಂ ಭಕ್ತಾನಾಂ ಅಯೋಗ್ಯಂ ಕಾಮಂ ಮಾರಯತೀತಿ ಸನತ್ಕುಮಾರಃ ।

ವಾಹನವಾಗಿ ಬಳಸಲಾದ ಅಶ್ವದಲ್ಲಿ ಅಶ್ವಾಕಾರನಾಗಿ ಇರುವ ನಾರಾಯಣಾನಿರುದ್ಧ ರೂಪಿ[1] ರಕ್ಷಣೆ ನೀಡಬೇಕೆಂದು ಪ್ರಾರ್ಥಿಸುವುದು ಸಮುಚಿತವಾದದು.

ವೇದಾದಿಸಕಲವಿದ್ಯೆಗಳನ್ನೂ ಶ್ವಾಸರೂಪದಲ್ಲಿ ಹೊರಹೊಮ್ಮಿಸಿದ,[2] ಪರಮ ಪವಿತ್ರನಾದ 'ಹಯಗ್ರೀವ' ದೇವತಿರಸ್ಕಾರ ಪ್ರಯುಕ್ತ ಸಂಭವಿಸುವ ಪಾಪವನ್ನು ಪರಿಹರಿಸುವನು. ವಿದ್ಯೆಗೆ ಸಂಕೇತನಾದ ಅವನು ಅಂತಹ ಪಾಪವನ್ನೆಸಗದಂತೆ ಜಾಗೃತಿಯನ್ನೂ ಅನುಗ್ರಹಿಸುವನು.

## ಅನ್ಯರನ್ನು ಪ್ರಾಧಾನ್ಯದೃಷ್ಟಿಯಿಂದ ಆರಾಧಿಸುವ ವಿಷಯದಲ್ಲಿ ಐತರೇಯನಿಂದ ರಕ್ಷಣೆ:

ಭಗವದ್ಭಕ್ತರಾದ ದೇವತೆಗಳನ್ನು ಅವನ ಪರಿವಾರಕ್ಕೆ ಸೇರಿದವರೆಂಬ ದೃಷ್ಟಿಯಿಂದ ಸ್ವೀಕರಿಸಬೇಕೇ ಹೊರತು ಸ್ವಾತಂತ್ರ್ಯದೃಷ್ಟಿಯಿಂದ ಸ್ವೀಕರಿಸಬಾರದು.[3] 'ಪರಿಸಂಹಿತೆ' ತಿಳಿಸಿದೆ—ಪ್ರಧಾನವಾಗಿ ಶ್ರೀಹರಿಯನ್ನೂ, ಅವನ ಸಂಬಂಧವನ್ನಿಟ್ಟುಕೊಂಡು ಅಂದರೆ ಅವನ ಪರಿವಾರಕ್ಕೆ ಸೇರಿದವರೆಂಬ ದೃಷ್ಟಿಯಿಟ್ಟುಕೊಂಡು ಇತರ ದೇವತೆಗಳೇ ಮುಂತಾದವನ್ನೂ ಧ್ಯಾನಿಸಬೇಕೇ ಹೊರತು ಅವನ ಪರಿವಾರದವರೆಂಬ ಭಾವನೆಯಿಲ್ಲದೆ ಬೇರೆ ಯಾರನ್ನೂ ಧ್ಯಾನಿಸಬಾರದೆಂದು.[4] ಈ ಮಾತು ಆರಾಧನೆಯ ವಿಷಯದಲ್ಲೂ ಅನ್ವಯಿಸುವಂತಹದ್ದು. ಆದ್ದರಿಂದ ಪ್ರಧಾನವಾಗಿ ಭಗವಂತನನ್ನೂ ಅವನ ಪರಿವಾರದವರನ್ನಾಗಿ ದೇವತೆಗಳನ್ನೂ ಅರ್ಚಿಸಬೇಕು. ಆದರೆ ಅಜ್ಞಾನದಿಂದ, ಅನ್ಯಥಾಜ್ಞಾನದಿಂದ ಅಥವಾ ದುರಾಗ್ರಹದಿಂದ ಇತರ ದೇವತೆಗಳನ್ನು ಪ್ರಾಧಾನ್ಯ ದೃಷ್ಟಿಯಿಂದ ಆರಾಧಿಸುವುದಿದೆ. ಇದರಿಂದಾಗಿ ಭಗವಂತನ ಸರ್ವೋತ್ತಮ ವ್ಯಕ್ತಿತ್ವಕ್ಕೆ ಅಪಚಾರ ಮಾಡಿದಂತಾಗುವುದು. ಅಲ್ಲದೆ, ಭಗವಂತನ ಪರಿವಾರದವರೆಂಬ ದೃಷ್ಟಿಯನ್ನಿಟ್ಟುಕೊಳ್ಳದೆ ನೀಡುವ ಪೂಜಾದಿಗಳನ್ನು 'ವೈದಿಕ

---

1 ನಾರಾಯಣಾನಿರುದ್ಧೌ ತು ತಥಾऽನ್ಯಕಶರಾಷು ಸ್ಥಿತೌ ।
ವೃಷಭಾಶ್ವಾದಿರೂಪೇಣ ತೃಪ್ತಿದಾವಖಿಲಸ್ಯ ಚ ॥
—ಐತರೇಯಸಂಹಿತೆ (ಐ. ಉ ಭಾ. 2-2-1-5)

2 ಹಯಗ್ರೀವಾದಿವಾ ವಿದ್ಯಾ: ಶ್ವಸಿತತ್ವೇನ ನಿಃಸೃತಾಃ । —ತಂ. ಸಾ. ಸಂ.

3 ಪರಿವಾರತಯಾ ಗ್ರಾಹ್ಯಾ ಅಪಿ ಹೇಯಾ ಪ್ರಧಾನತಃ । —ಅ. ವ್ಯಾ. 1-1-134

4 ಪ್ರಾಧಾನ್ಯೇನ ಹರಿರ್ಧ್ಯೇಯಸ್ತತ್ಸಂಬಂಧಾಚ್ ಸುರಾದಯಃ । ಧ್ಯೇಯಾ ನಾನ್ಯತ್ ಕ್ವಚಿದ್ಧ್ಯಾಯೋದ್ಧರಾವನುಪಯೋಗಿ ಯತ್
— ಹರಿಸಂಹಿತೆ (ಭಾಗ. ತಾ. ನಿ. 11-5-42)

ದೇವತೆಗಳಾದ ಬ್ರಹ್ಮಾದಿಗಳು ಸ್ವೀಕರಿಸುವುದೂ ಇಲ್ಲ.[1]

ಇಂತಹ ಆರಾಧನೆ ನಮ್ಮಿಂದ ನಡೆಯದಂತೆ ದೇವರ್ಷಿಶ್ರೇಷ್ಠನಾದ ಐತರೇಯ ರಕ್ಷಿಸಬೇಕು [2] ಒಂದುವೇಳೆ ಪ್ರಾರಬ್ಧಕರ್ಮಕ್ಕನುಗುಣವಾಗಿ ನಮ್ಮಿಂದ ಇಂತಹ ಪೂಜೆ ನಡೆದರೆ, ಅದರಿಂದಾಗಿ ಉಂಟಾಗುವ ಪಾಪದಿಂದಲೂ ಐತರೇಯ ಪಾರು ಮಾಡಬೇಕು.

ಸಾತ್ವತತಂತ್ರಶಾಸ್ತ್ರವನ್ನು ನಾರದರಿಗೆ ಉಪದೇಶಿಸಿ, ಅವರಿಗೆ ದೇವರ್ಷಿತ್ವ ವನ್ನು ತಂದುಕೊಟ್ಟ ಐತರೇಯನಲ್ಲಿ[3] ಪೂಜಾವಿಧಾನದ ವಿಷಯದಲ್ಲಿ ಪ್ರಮಾದ ಎಸಗಲ್ಪಡದಂತೆ ರಕ್ಷಣೆಯನ್ನು ಕೇಳುವುದು ಸಮಂಜಿತವಾದುದು.

'ದೇವರ್ಷಿವರ್ಯ'-ಎಂದೇ ಉಲ್ಲೇಖಿಸಲ್ಪಟ್ಟ ಐತರೇಯ ಜ್ಞಾನಿಶ್ರೇಷ್ಠ ನಾಗಿದ್ದು, ತನ್ನನ್ನು ಹಾಗೆ ಉಪಾಸಿಸುವವರಿಗೆ ಸರಿಯಾಗಿ ಆರಾಧಿಸುವುದಕ್ಕೆ ಬೇಕಾದ ತಿಳುವಳಿಕೆಯನ್ನು ಅನುಗ್ರಹಿಸುವನೆಂಬುದು ಸೂಚಿತವಾಗಿದೆ.

## ಎಲ್ಲ ನರಕಗಳ ವಿಷಯದಲ್ಲಿ ಕೂರ್ಮನಿಂದ ರಕ್ಷಣೆ:

ಎಂಭತ್ತನಾಲ್ಕು ಲಕ್ಷ ನರಕಗಳಿವೆ. ಇವುಗಳಲ್ಲಿ ತಾಮಿಸ್ರವೇ ಮುಂತಾದ ಇಪ್ಪತ್ತೊಂದು ನರಕಗಳು ಪ್ರಧಾನವಾದವು ಎಂದು ಗರುಡ ಪುರಾಣ ತಿಳಿಸಿದೆ.[5] ಭಾಗವತದಲ್ಲೂ ಇಪ್ಪತ್ತೊಂದು ಅಥವಾ ಇಪ್ಪತ್ತೆಂಟು ಪ್ರಧಾನ ನರಕಗಳೆಂದು ತಿಳಿಸಲಾಗಿದೆ.[5] ಬ್ರಹ್ಮಸೂತ್ರದಲ್ಲಿ ಮಹಾಭಾರತದ ಆಧಾರದ ಮೇಲೆ ರೌರವವೇ ಮುಂತಾದ ಏಳು ನರಕಗಳು ಪ್ರಧಾನಗಳೆಂದು ತಿಳಿಸಲಾಗಿದೆ [6] ಪರವಿತ್ತಾಪತ್ಯಕಳ

---

1 ಯದ್ ಭಾಗವತಬುದ್ಧ್ಯೈವ ದತ್ತಂ ಬ್ರಹ್ಮಾದಯಃ ಸುರಾಃ । ನೈವ ದೈವಿಕಾ ಪ್ರತಿಗೃಹ್ಣೀಯುಃ........ । —ಸಾರನಿರ್ಣಯ (ಛಾಂ. ಉ. ಭಾ. 1-1-1)

2 ವಿಷ್ಣೋರಪರಿವಾರತ್ವದೃಷ್ಟ್ಯಾ ದೇವಾಂತರಾರ್ಚನಾತ್ ।
ಮಹಿದಾಸೋ ದೇವಋಷಿಃ ಪಾತು ಮಾಂ ವಿಷ್ಣುರವ್ಯಯಃ ।
ತದನರ್ಪಿತಕರ್ಮಭ್ಯಸ್ತದಸ್ಮರಣತಸ್ತಥಾ —ಭಾಗ.ತಾ.ನಿ. 6-8-17

3 ಅವತಾರಸ್ತೃತೀಯೋಽಸ್ಯ ದೇವರ್ಷಿಃ ಪ್ರಥಿತೋ ದಿವಿ । ಮಹಿದಾಸಸ್ತ್ವೈತರೇಯೋ ಯಸ್ತಂತ್ರಂ ನಾರದೇಽವದತ್ ಭಾಗ. ತಾ. ನಿ. 1-3-8

4 ಚತುರಶೀತಿಲಕ್ಷಾಣಿ ನರಕಾಃ ಸಂತಿ ಖೇಚರ । ತೇಷಾಂ ಮಧ್ಯೇ ಘೋರತಮಾ ಧೌರೇಯಾಸ್ತ್ವೇಕವಿಂಶತಿಃ —ಗ. ಪು. 3-65

5 ತತ್ರ ಹೈಕೇ ನರಕಾನೇಕವಿಂಶತಿಂ ಗಣಯಂತಿ....ಇತ್ಯಷ್ಟಾವಿಂಶತಿನರಕಾಃ ವಿವಿಧಯಾತನಾಭೂಮಯಃ ಭಾಗ. 5-26-7

6 ಅಪಿ ಸಪ್ತ —ಬ್ರ. ಸೂ. 3-1-16

ತ್ಯಾಪಹಾರಾದಿ ಅಪರಾಧಗಳಿಂದಾಗಿ ಇಂತಹ ನರಕಗಳನ್ನು ಹೊಂದಬೇಕಾಗುವುದು.

ನರಕಗಳಲ್ಲಿ ಬೀಳಲು ಎಸಗಬಹುದಾದ ಪಾಪಗಳು ನಡೆಯದಂತೆ ಮಾಡುವುದರ ಮೂಲಕ ಕೂರ್ಮ ರಕ್ಷಣೆ ನೀಡಬೇಕು. ಅಲ್ಲದೆ, ಒಂದು ವೇಳೆ ಪ್ರಾರಬ್ಧ ಕರ್ಮಕ್ಕನುಗುಣವಾಗಿ ಪಾಪಗಳೆನ್ನೆಸಗಿ ನರಕಗಳಲ್ಲಿ ಬೀಳುವಂತಾದರೂ, ಅವುಗಳಿಂದ ಆದಷ್ಟು ಬೇಗ ಪಾರಾಗುವಂತೆ ಕೂರ್ಮ ರಕ್ಷಿಸಬೇಕು.

ಮಂದರ ಪರ್ವತವನ್ನೇ ಮೇಲಕ್ಕೆತ್ತಿದ ಕೂರ್ಮನಿಗೆ ಪಾಪಿಯನ್ನು ನರಕಗಳಿಂದ ಉದ್ಧರಿಸುವುದೇನೂ ಅಸಾಧ್ಯದ ಮಾತಲ್ಲ.

ಕುತ್ಸಿತನಾದ ಪಾಪಿಯಲ್ಲೂ ಪ್ರೇರಕನಾಗಿ ಇದ್ದು, ಅವನಿಂದ ಅಧಿಕಪಾಪ ಎಸಗಲ್ಪಡದಂತೆ ಅನುಗ್ರಹಿಸುತ್ತಿರುವ ಪ್ರಯುಕ್ತ, ಹಾಗೆಯೇ ಕುತ್ಸಿತಗಳಾದ ನರಕಗಳಲ್ಲೂ ಇದ್ದು,[1] ಅಲ್ಲಿಯ ಪಾಪಿಗಳು ಉದ್ಧಾರ ಹೊಂದುವಂತೆ ಅನುಗ್ರಹಿಸುತ್ತಿರುವ ಪ್ರಯುಕ್ತ "ಕೂರ್ಮ" ಎನಿಸಿರುವವನು ಭಗವಂತನು.

### ಅಪಥ್ಯ ಆಹಾರದ ಸ್ವೀಕಾರದ ವಿಷಯದಲ್ಲಿ ಧನ್ವಂತರಿಯಿಂದ ರಕ್ಷಣೆ :

ನಾಲಗೆಚಾಪಲ್ಯಕ್ಕೊಳಗಾಗಿ ದೇಹಕ್ಕೆ ಅಹಿತವಾಗಿದ್ದು ನಾನಾ ರೋಗಗಳಿಗೆ ನಿಮಿತ್ತವಾಗಬಲ್ಲ ಆಹಾರವನ್ನೂ ಸೇವಿಸುವುದಿದೆ. ದೈಹಿಕ ಆರೋಗ್ಯದ ಬಗ್ಗೆ ಜಾಗರೂಕರಾಗಿದ್ದರೂ ಅಂತಃಕರಣದ ಶುದ್ಧಿಯ ಕುರಿತು ಗಮನ ಹರಿಸದೆ ಕೆಟ್ಟ ವಿಚಾರಗಳಿಗೆ ಪ್ರಚೋದನೆ ನೀಡುವುದರ ಮೂಲಕ ಮಾನಸಿಕ ಕಾಲುಷ್ಯಕ್ಕೆ ನಿಮಿತ್ತವಾಗಬಲ್ಲ ಆಹಾರವನ್ನು ಸೇವಿಸುವುದಿದೆ. ಹೀಗೆ ದೈಹಿಕವಾಗಿ, ಮಾನಸಿಕವಾಗಿ ಅಪಥ್ಯ ಎನಿಸುವ ಆಹಾರವನ್ನು ಸೇವಿಸದಂತೆ ಧನ್ವಂತರಿ ರಕ್ಷಿಸಬೇಕು. ಒಂದು ವೇಳೆ, ಪ್ರಾರಬ್ಧಕರ್ಮಕ್ಕನುಗುಣವಾಗಿ ಅಂತಹ ಆಹಾರವನ್ನು ಸ್ವೀಕರಿಸಿದರೂ ಅದು ಹೆಚ್ಚಾಗಿ ಪ್ರಭಾವ ಬೀರದಂತೆಯೂ ಧನ್ವಂತರಿ ರಕ್ಷಿಸಬೇಕು.

ಧನ್ವಂತರಿ ಚಂದ್ರಮಂಡಲದಲ್ಲಿದ್ದು, ತನ್ನ ಅಮೃತಮಯಕಿರಣಗಳಿಂದ ಇಡೀ ಜಗತ್ತಿಗೇ ಚೇತರಿಕೆಯನ್ನು ನೀಡುತ್ತಿರುವನು.[2] ಅಲ್ಲದೆ, ಎಲ್ಲರ ಶರೀರದಲ್ಲಿ ನೆತ್ತಿ, ಹುಬ್ಬುಗಳ ಮಧ್ಯೆ, ಕಿರುನಾಲಗೆ, ಹೃದಯ, ಹೊಕ್ಕುಳು ಹಾಗೂ ಕೆಳಭಾಗ—

---

1 ಕು ಕುತ್ಸಿತೇಷು ಪಾಪಿಷು ನರಕೇಷು ವಾ ಋಚ್ಛತಿ ಪ್ರೇರಕತಯಾ ಗಚ್ಛತೀತಿ ಕೂರ್ಮಃ ।

2 ಚಂದ್ರೌಘಕಾಂತಿಮಮೃತೋರುಕರೈರ್ಜಗಂತಿ ಸಂಜೀವಯಂತಮಮಿತಾತ್ಮಸುಖಂ ಪರೇಶಮ್ ।....ಶೀತಾಂಶುಮಂಡಲಗತಂ ಸ್ಮರತಾತ್ಮಸಂಸ್ಥಮ್ ।

—ತಂ. ಸಾ. ಸಂ. 4-91

ಈ ಸ್ಥಳಗಳಲ್ಲಿ ಇದ್ದುಕೊಂಡು ಅಮೃತವನ್ನು ಸುರಿಸುತ್ತ ಬದುಕುವಂತೆ ಅನು ಗ್ರಹಿಸುತ್ತಿರುವನು.[1]

ಇಂತಹ ಧನ್ವಂತರಿಯು ತನ್ನ ಭಕ್ತರನ್ನು ಪಾಪದಿಂದಲೂ, ಪಾಪಮೂಲಕ ವಾದ ರೋಗದಿಂದಲೂ ಪಾರುಮಾಡುವ ಪ್ರಯುಕ್ತ[2] 'ಧನ್ವಂತರಿ' — ಎಂದು ಸಾರ್ಥಕವಾಗಿ ಕರೆಸಿಕೊಳ್ಳಲ್ಪಡುವನು.

## ದ್ವಂದ್ವಪ್ರಯುಕ್ತ ಭಯದಿಂದ ಋಷಭನಿಂದ ರಕ್ಷಣೆ:

ಜಯಾಪಜಯ, ಮಾನಾಪಮಾನ, ಲಾಭನಷ್ಟ–ಮುಂತಾದ ದ್ವಂದ್ವಗಳು ಬದುಕಿನ ಉಚ್ಚತ್ವ ನೀಚತ್ವ ವಿಕಾರಗಳಿಗೆ ನಿಮಿತ್ತಗಳಾಗಿದ್ದು, ಪ್ರಶಾಂತತೆಯನ್ನು ಕೆಡಿಸುವವು. ಈ ದ್ವಂದ್ವಗಳಿಗೆ ಜೀವನವು ಹೆಚ್ಚಾಗಿ ಸ್ಪಂದಿಸದೆ ಸ್ತಿಮಿತತೆಯನ್ನು ಕಳೆದುಕೊಳ್ಳದಂತೆ ಋಷಭನು ರಕ್ಷಿಸಬೇಕು.

ಋಷಭರೂಪಿ ಭಗವಂತನು ತನ್ನ ಅವತಾರದ ಕೊನೆಯ ಅವಧಿಯಲ್ಲಿ ಯೋಗಿಗಳಿಗೆ ಶಿಕ್ಷಣ ನೀಡುವುದಕ್ಕಾಗಿ ಅವಧೂತ ಚರ್ಯೆಯನ್ನು ಅಳವಡಿಸಿ ಕೊಂಡು[3] ಮಾನಾಪಮಾನ ಮುಂತಾದ ದ್ವಂದ್ವಗಳನ್ನು ಮೀರಿದ ನಡತೆಯನ್ನು ತೋರಿಸಿಕೊಟ್ಟವನು. ಇಂತಹವನಲ್ಲಿ ದ್ವಂದ್ವಭಯದಿಂದ ರಕ್ಷಿಸಲು ಕೇಳಿಕೊಳ್ಳು ವುದು ಸಮುಚಿತವಾದುದು.

## ದುಷ್ಟಜನರ, ಅವರ ಉಪದ್ರವದ ವಿಷಯದಲ್ಲಿ ಯಜ್ಞನಿಂದ ರಕ್ಷಣೆ:

ಆಕೂತಿಯ ಪುತ್ರನಾಗಿ ಅವತರಿಸಿದ 'ಯಜ್ಞ'ನಾಮಕ ಭಗವಂತನು ಸ್ವಾಯಂಭುವ ಮನುವನ್ನು ತಿನ್ನಲು ಬಂದ ರಾಕ್ಷಸರನ್ನು ಸಂಹರಿಸಿ, ಅವನಿಗೆ

---

1 ‘ಮೂರ್ಧ್ನಿಸ್ಥಿತಾದಮೃತ ಏವ ಸುಧಾಂ ಸ್ರವಂತೀಂ ಭ್ರೂಮಧ್ಯಗಾಚ್ಚ ತತ ಏವ ಚ ತಾಲುಸಂಸ್ಥಾತ್ । ಹಾರ್ದಾಚ್ಚ ನಾಭಿಸದನಾದಧರಸ್ಥಿತಾಚ್ಚ ಧ್ಯಾತ್ವಾ....
—ತಂ. ಸಾ. ಸಂ. 4-92

2 ಧನ್ವಂ ಪಾಪಂ, ತತ್ಪ್ರಯುಕ್ತರೋಗೋ ವಾ । ತತ್ ತಾರಯತೀತಿ ಧನ್ವಂತರಿಃ ।
—ಸತ್ಯಧರ್ಮತೀರ್ಥಾಚಾರ್ಯೇಣ

3 ‘ಅಥೈವಮಖಿಲಲೋಕಪಾಲಲಲಾಮೋ ವಿಲಕ್ಷಣೋ ಜಡವದವಧೂತವೇಷ-ಭಾಷಾಚರಿತ್ರೈರವಿಲಕ್ಷಿತಭಗವತ್ಪ್ರಭಾವೋ ಯೋಗಿನಾಂ ವಿವಿಧಸಾಂಪರಾಯ-ವಿಧಿಮನುಶಿಕ್ಷಯನ್....’ —ಭಾಗ. 5-6-6

ರಕ್ಷಣೆ ನೀಡಿದವನು,[1] ಆದ್ದರಿಂದ ಅವನಲ್ಲಿ ದುಷ್ಟಜನರಿಂದ ರಕ್ಷಣೆ ನೀಡುವಂತೆ, ಅವರು ಆಕ್ರಮಿಸಿ ಬಿಟ್ಟರೆಂದರೆ ಅವರ ಹಿಂಸೆಯಿಂದ ರಕ್ಷಣೆ ನೀಡುವಂತೆ[2] ಪ್ರಾರ್ಥಿಸಿಕೊಳ್ಳುವುದು ಸಮುಚಿತ.

ಅಥವಾ ಆಕೂತಿರುಚಿದಂಪತಿಗಳಲ್ಲಿ ಅವತರಿಸಿರುವ ಯಜ್ಞಗಳಿಗೆ ಒಡೆಯನಾಗಿದ್ದು 'ಯಜ್ಞ' ಎನಿಸಿರುವ[3] ಭಗವಂತನು ತನ್ನ ಒಡೆತನದಲ್ಲಿರುವ ಯಜ್ಞವು ಸ್ವರ್ಗ ಮುಂತಾದ ಲೋಕಗಳಿಗಾಗಿ ಆಚರಿಸಲ್ಪಡದೆ,[4] ನಿಷ್ಕಾಮನೆಯಿಂದ ಆಚರಿಸಲ್ಪಡುವಂತೆ ಅನುಗ್ರಹಿಸುವುದರ ಮೂಲಕ ರಕ್ಷಿಸಲಿ—ಎಂದು ಪ್ರಾರ್ಥಿಸಲಾಗುವುದು.

### ಸರ್ಪನೇ ಮುಂತಾದವುಗಳ ವಿಷಯದಲ್ಲಿ ಬಲನಿಂದ ರಕ್ಷಣೆ:

ಶೇಷಾವತಾರನಾದ ಬಲರಾಮನಲ್ಲಿ ರಾಮನಾಮಕ ಭಗವಂತನ ಆವೇಶವಿದೆ.[5] ಅವನು ಬಲ ಎಂದೂ ಕರೆಸಿಕೊಳ್ಳಲ್ಪಡುವನು.[6] ಸರ್ಪಗಳಿಗೆ ಒಡೆಯನಾದ ಶೇಷನ ಪ್ರತೀಕದಲ್ಲಿ ಇರುವ ಬಲನಾಮಕ ಭಗವಂತನಿಂದ ಸರ್ಪಗಳ ವಿಷಯದಲ್ಲಿ ರಕ್ಷಣೆ ಬೇಡಿಕೊಂಡಿರುವುದು ಸಮುಚಿತ.

### ವೇದವ್ಯಾಸರಿಂದ ಅಜ್ಞಾನದ ಅನ್ಯಥಾಜ್ಞಾನದ ವಿಷಯದಲ್ಲಿ ರಕ್ಷಣೆ:

ವೇದದ ವಿಭಾಗ, ಮಹಾಭಾರತ ಪುರಾಣಾದಿಗಳ ನಿರ್ಮಾಣ—ಇವುಗಳಿಂದಾಗಿ

---

1 'ಸ್ವಾಯಂಭುವಃ ಸ್ವದೌಹಿತ್ರಂ ವಿಷ್ಣುಂ ಯಜ್ಞಾಭಿಧಂ ಮನುಃ । ಈಶಾವಾಸ್ಯಾದಿಭಿರ್ಮಂತ್ರೈಃ ಸ್ತುತ್ವಾವಾವಹಿತಾತ್ಮನಾ । ರಕ್ಷೋಭಿರುಗ್ರೈಃ ಸಂಪ್ರಾಪ್ತಃ ಖಾದಿತುಂ ಮೋಚಿತಸ್ತದಾ । ಸ್ತೋತ್ರಂ ಶ್ರುತ್ವೈವ ಯಜ್ಞೇನ ತಾನ್ ಹತ್ವಾSವಧ್ಯತಾಂ ಗತಾನ್' —ಬ್ರಹ್ಮಾಂಡೇ (ಈ. ಉ. ಭಾ)

2 ಲೋಕಾದುರ್ಜನಾದ್ರಕ್ಷಆದೇರುತ ತತ್ಕೃತಾದುಪದ್ರವಾತ್ । ಪ್ರಥಮತಸ್ತದಪ್ರಾಪ್ತಿಪ್ರಾರ್ಥನಂ ಕಥಂಚಿದಾಗಮನೇ ತತ್ಪ್ರಶಾಸನಮಿತ್ಯುಕ್ತಮಿತಿ ವೇದಿತವ್ಯಮ್ । —ಸತ್ಯ

3 ಯಃ ಜ್ಞೇಶತ್ವಾತ್ ಸ್ವಯಂ ವಿಷ್ಣುರ್ಯಜ್ಞೋ ರುಚಿಸುತಃ ಸ್ಮೃತಃ —ಪಾದ್ಮೆ (ಭಾಗ. ತಾ. ನಿ. 2-7-2)

4 ತತ್ಕೃತಾದ್ ಯಜ್ಞಕರ್ಮಾಪಾದಿತಾದನಿತ್ಯಫಲಾತ್ ಸ್ವರ್ಗಾದೇಃ । ಯಜ್ಞನಾಮಾ ಯಾಗಪ್ರವರ್ತಕೋ ವಿಷ್ಣುಃ —ವಿಜಯ

5 'ರಾಮ ಏಕೋ ಹ್ಯನೇತಾಂಶಸ್ತತ್ರ ರಾಮಾಭಿಧೋ ಹರಿಃ । ಶುಕ್ಲಕೇಶಾತ್ಮಕಸ್ತ್ವಷ್ಟನ್ ರಮಯಾಮಾಸ ವೈ ಜಗತ್' —ಬ್ರಾಹ್ಮೇ (ಭಾಗ. ತಾ. ನಿ. 2-7-26)

6 '....ಬಲಭೀಮಪಾರ್ಥವ್ಯಾಖ್ಯಾಹ್ವಯೇನ ಹರಿಣಾ....' (ಭಾಗ. 2-7-35) ಇತ್ಯತ್ರ ಬಲನಾಮ ಮುಖ್ಯತಃ ಹರೌ ವರ್ತತೇ ಇತ್ಯುಕ್ತಮ್ ।

ಅಜ್ಞಾನವನ್ನು ಹಾಗೂ ಅನ್ಯಥಾಜ್ಞಾನವನ್ನು ಪರಿಹರಿಸಿದ ಶ್ರೀವೇದವ್ಯಾಸರಿಂದ ಅಜ್ಞಾನವನ್ನು ಅನ್ಯಥಾಜ್ಞಾನವನ್ನು ತೊಲಗಿಸಿ, ರಕ್ಷಿಸುವುದಕ್ಕಾಗಿ ಪ್ರಾರ್ಥಿಸಿ ಕೊಂಡಿರುವುದು ಔಚಿತ್ಯಪೂರ್ಣವಾದುದು.

**ಪಾಷಂಡರಿಂದ ಅನ್ಯಥಾಜ್ಞಾನ ಬರದಂತೆ ಬುದ್ಧನಿಂದ ರಕ್ಷಣೆ:**

ವೇದಧರ್ಮವನ್ನು ಖಂಡಿಸುವ[1] ಬೌದ್ಧ, ಪಾಶುಪತಾದಿಗಳು ಪಾಷಂಡಗಳೆ ನಿಸಿವೆ.[2] ಇಂತಹ ಪಾಷಂಡಮತಗಳ ಪ್ರಭಾವದಿಂದಾಗಿ ಅನ್ಯಥಾಜ್ಞಾನ ಬರದಂತೆ ಬುದ್ಧನು ರಕ್ಷಿಸುವನು, ಅಯೋಗ್ಯರಿಗೆ ತತ್ತ್ವಜ್ಞಾನ ದೊರಕದಂತೆ ಮಾಡಬೇಕೆಂದು ಅವತರಿಸಿರುವ 'ಬುದ್ಧ' ದೇವತೆಗಳೇ ಮುಂತಾದ ಯೋಗ್ಯರಿಗೆ ಸರಿಯಾದ ತಿಳು ವಳಿಕೆಯನ್ನೇ ನೀಡಿ, ಯೋಗ್ಯರ ಮೇಲೆ ಪಾಷಂಡಿಗಳ ಪ್ರಭಾವ ಬೀರದಂತೆ ಮಾಡಿರುವನು. ಅವನಲ್ಲಿ ಪಾಷಂಡಿಗಳ ಪ್ರಮಾದದಿಂದ ಪಾರುಮಾಡಲು ಪ್ರಾರ್ಥಿಸಿಕೊಳ್ಳುವುದು ಸಮುಚಿತ.

ತಾನು ನಿತ್ಯ ಜ್ಞಾನಸಂಪನ್ನನಾಗಿದ್ದು 'ಬುದ್ಧ' ಎನಿಸಿರುವ ಭಗವಂತನು,[3] ಉಳಿದ ಯೋಗ್ಯರಿಗೆ ಒಳ್ಳೆಯ ಜ್ಞಾನವನ್ನು ನೀಡಿ ಪಾಷಂಡಿಗಳ ಮತಗಳ ಪ್ರಭಾವ ದಿಂದ ಪ್ರಮಾದ ಬಾರದಂತೆ ರಕ್ಷಿಸುವನು.

**ಕಲಿಕಾಲ ಪ್ರಯುಕ್ತ ಮಾಲಿನ್ಯದಿಂದ ಕಲ್ಕಿಯು ರಕ್ಷಿಸುವನು:**

ಕಲಿಯುಗಕ್ಕೆ ಅಭಿಮಾನಿಯಾಗಿರುವ ಕಲಿಯನ್ನು ಬಂಧಿಸುವುದರಿಂದ, ಹಿಂಸಿಸುವುದರಿಂದ "ಕಲ್ಕೀ" ಎಂದೆನಿಸುವವನು–ಭಗವಂತ.[4] ಅಂತಹವನಲ್ಲಿ ಕಲಿ ಕಾಲ ಪ್ರಯುಕ್ತ ಕಾಲುಷ್ಯ ಬಾರದಂತೆ ರಕ್ಷಣೆ ನೀಡಲು ಪ್ರಾರ್ಥಿಸುವುದು ಸಮುಚಿತ.

**ಆಯುಧ, ಭೂಷಣ, ಚಿಹ್ನೆ, ವಾಹನ ರೂಪಗಳಿಂದ ರಕ್ಷಣೆ:**

ಭಗವಂತನು ತನ್ನ ಕೌಸ್ತುಭ ಮುಂತಾದ ಆಭರಣಗಳಲ್ಲೂ, ಸುದರ್ಶನ

---

1 ಪಾಲನಾಚ್ಚ ತ್ರಯೀಧರ್ಮಃ ಪಾಶಬ್ದೇನ ನಿಗದ್ಯತೇ । ತಂ ಖಂಡಯಂತಿ ಯೇ ಯಸ್ಮಾತ್ ಪಾಖಂಡಾಸ್ತೇನ ಹೇತುನಾ ॥

2 'ಬೌದ್ಧಪಾಶುಪತಾದ್ಯಾಸ್ತು ಪಾಷಂಡಾ ಇತಿ ಕೀರ್ತಿತಾಃ ।
—ನಾರದೀಯೇ (ಗೀ. ತಾ. 2-39)

3 'ಬುದ್ಧೋಽಹಮಿತ್ಯೇವ ಸ ನಿತ್ಯಬೋಧಾಜ್ಜಗಾದ........'
—ಮ. ಭಾರ ತಾ. ನಿ. 32-148

4 ಕಲೇಸ್ತು ಕಾತ್ಕಾರತ ಏವ ಕಲ್ಕೀ.... —ಮ. ಭಾರ. ತಾ. ನಿ. 32-167

ಮುಂತಾದ ಆಯುಧಗಳಲ್ಲೂ, ಗರುಡ ಮುಂತಾದ ವಾಹನಗಳಲ್ಲೂ ಆಯಾ ವ್ಯಕ್ತಿತ್ವವನ್ನು, ಸಾಮರ್ಥ್ಯವನ್ನು ವ್ಯಕ್ತಗೊಳಿಸುವ ಆವಿರ್ಭಾವಗಳನ್ನು ಹೊಂದಿರುವನು.[1]

ಅಲ್ಲದೆ ಅವನ ಆಯುಧ, ಆಭರಣಾದಿಗಳು ಅಚೇತನಗಳಲ್ಲ. ಬೇರೆ ಬೇರೆ ದೇವತೆಗಳೇ ಆಯಾ ಆಯುಧಾದಿಗಳ ರೂಪವನ್ನು ತೊಟ್ಟಿರುವರು. ಆದುದರಿಂದ ಆಯುಧಾದಿಗಳಲ್ಲಿ ಪ್ರಾರ್ಥಿಸುವಾಗ, ಹಾಗೂ ಭಗವಂತನು ಆಯಾ ಆಯುಧ ಗಳನ್ನು, ಆಭರಣಗಳನ್ನು ಧರಿಸಿರುವನೆಂದು ಉಲ್ಲೇಖಿಸಲ್ಪಟ್ಟಾಗ ಆ ಆಯುಧಾದಿ ಗಳ ರೂಪ ತಾಳಿರುವ ದೇವತೆಗಳನ್ನು ಸ್ಮರಿಸಿಕೊಳ್ಳಬೇಕು.

ಸುದರ್ಶನ ಚಕ್ರದಲ್ಲಿ ಶತ್ರುಸೈನ್ಯವನ್ನು ಸುಡಲು ಪ್ರಾರ್ಥಿಸಿಕೊಳ್ಳುವಾಗ[2] ಹರಿಯ ಕೈಯಲ್ಲಿ[3] ಮತ್ತು ವಿಷ್ಣುವಿನ ಕೈಯಲ್ಲಿ ಚಕ್ರ ಇದೆ ಎಂದು ಉಲ್ಲೇಖಿಸು ವಾಗ[4] ತಮೋಭಿಮಾನಿನಿ ದುರ್ಗಾದೇವಿ ಆ ಚಕ್ರರೂಪದಲ್ಲಿರುವಳೆಂಬುದನ್ನು[5] ಅನುಸಂಧಾನದಲ್ಲಿ ತಂದುಕೊಳ್ಳಬೇಕು.

ಪಾಂಚಜನ್ಯ ಶಂಖದಲ್ಲಿ ಶತ್ರುಗಳನ್ನು ಓಡಿಸಲು ಪ್ರಾರ್ಥಿಸುವಾಗ[6] ಹಾಗೂ ಹರಿಯ ಕೈಯಲ್ಲಿ ಶಂಖ ಇದೆ ಎಂದು ಉಲ್ಲೇಖಿಸುವಾಗ ಸತ್ತ್ವಾಭಿಮಾನಿನಿಯಾದ ಶ್ರೀದೇವಿ ಆ ಶಂಖರೂಪದಲ್ಲಿರುವಳೆಂಬ[7] ಅನುಸಂಧಾನವನ್ನು ತಂದುಕೊಳ್ಳಬೇಕು.

ಕೌಮೋದಕೀಗದೆಯಲ್ಲಿ ಅಸುರೀಶಕ್ತಿಯನ್ನು ಪುಡಿಗೈಯಲು ಕೇಳಿಕೊಳ್ಳು ವಾಗ[8], ಹರಿಯ ಕೈಯಲ್ಲಿ, ಕೇಶವನ ಕೈಯಲ್ಲಿ[9] ಗದೆ ಇದೆ ಎಂದು ಉಲ್ಲೇಖಿಸುವಾಗ

---

1 ಏಕ ಏವ ಪರೋ ವಿಷ್ಣುರ್ಭೂಷಾಹೇತಿಧ್ವಜೇಷ್ವಜಃ । ತತ್ತಚ್ಛಕ್ತಿಸ್ವರೂಪೇಣ ಸ್ವಯಮೇವ ವ್ಯವಸ್ಥಿತಃ । ಸತ್ಯೇನಾನೇನ ದೇವಃ ಪಾತು ಸರ್ವೇಶ್ವರೋ ಹರಿಃ ।
—ಭಾಗ. ತಾ. ನಿ.

2 ಚಕ್ರಂ ಯುಗಾಂತಾನಲತಿಗ್ಮನೇಮಿ.... ...ಹುತಾಶಃ 6-8-23

3 ಹರಿರ್ವಿದಧ್ಯಾತ್....ದರಾರಿ.... 6-8-12

4 ....ಮಾಧ್ಯಂದಿನೇ ವಿಷ್ಣುರರೀಂದ್ರಪಾಣಿಃ 6-8-20

5 ಪೂರ್ವಂ ಹರೇಶ್ಚಕ್ರಮಭೂದ್ಧಿ ದುರ್ಗಾ ತಮಃಸ್ಥಿತಾ
—ಮ. ಭಾರ. ತಾ. ನಿ. 3-75

6 "ತ್ವಂ ಯಾತುಧಾನ....ದರೇಂದ್ರ ವಿದ್ರಾವಯ...." 6-8-25

7 ....ಶ್ರೀರಿತಿ ಂತಿ । ಸತ್ತ್ವಾತ್ಮಿಕಾ ಶಂಖಂ....
—ಮ. ಭಾರ. ತಾ. ನಿ. 3-76

8 ಗದೇ....ಚೂರ್ಣಯಾರೀನ್ 6-8-24

9 ಮಾಂ ಕೇಶವೋ ಗದಯಾ ಪ್ರಾತರವ್ಯಾದ್.... 6-8-20

ವಾಯುದೇವನೇ ಆ ಗದಾರೂಪದಲ್ಲಿರುವನೆಂದು ಚಿಂತಿಸಬೇಕು.[1]

ಅವನ ಕತ್ತಿನಲ್ಲಿ ಶತ್ರುಸೈನ್ಯವನ್ನು ತುಂಡರಿಸಲು ಕೇಳಿಕೊಳ್ಳುವಾಗ,[2] ಹರಿಯ ಕೈಯಲ್ಲಿ ಹಾಗೂ ಜನಾರ್ದನನ ಕೈಯಲ್ಲಿ ಇದೆ ಎಂದು ಉಲ್ಲೇಖಿಸುವಾಗ[3] ಆ ರೂಪದಲ್ಲಿ ಇರುವ ದುರ್ಗಾದೇವಿಯ ಅನುಸಂಧಾನವನ್ನು ತಂದುಕೊಳ್ಳಬೇಕು.

ಶತಚಂದ್ರ ಎಂಬ ಗುರಾಣಿಯಲ್ಲಿ ದ್ವೇಷಿಗಳ ಕಣ್ಣು ಮುಚ್ಚಲು ಪ್ರಾರ್ಥಿಸಿಕೊಳ್ಳುವಾಗ,[4] ಹಾಗೂ ಹರಿಯ ಕೈಯಲ್ಲಿ ಗುರಾಣಿ ಇದೆ ಎಂದು ಉಲ್ಲೇಖಿಸುವಾಗ, ಆ ಗುರಾಣಿಯ ರೂಪದಲ್ಲಿರುವ[5] ದರ್ಗೆಯನ್ನು ಸ್ಮರಿಸಿಕೊಳ್ಳಬೇಕು.

ಶಾರ್ಙ್ಗ ಧನುಸ್ಸನ್ನು ಹರಿಯ ಕೈಯಲ್ಲಿ, ನಾರಾಯಣನ ಕೈಯಲ್ಲಿ ಮಧುಸೂದನನ ಕೈಯಲ್ಲಿ ಉಲ್ಲೇಖಿಸುವಾಗ[6] ಆ ಧನಸ್ಸಿನರೂಪದಲ್ಲಿರುವ ವಿದ್ಯಾ ಎನಿಸುವ ರಮಾದೇವಿಯನ್ನು ನೆನಪಿಸಿಕೊಳ್ಳಬೇಕು.[7]

ಹರಿಯ ಕೈಯಲ್ಲಿ ಬಾಣವನ್ನು ಉಲ್ಲೇಖಿಸುವಾಗ, ಆ ರೂಪದಲ್ಲಿರುವ ಪಂಚಾತ್ಮಕ ಪ್ರಾಣದೇವನ ಅನುಸಂಧಾನವನ್ನು ಮಾಡಬೇಕು.[8]

ಗೋವಿಂದನು ಕೊಳಲನ್ನು ಊದುತ್ತ ಸಂಗವಕಾಲದಲ್ಲಿ ರಕ್ಷಿಸುತ್ತಾನೆಂದು ಕೊಳಲನ್ನು ಉಲ್ಲೇಖಿಸುವಾಗ,[9] ಲಕ್ಷ್ಮೀದೇವಿ ಆ ಕೊಳಲನ್ನು ಪ್ರವೇಶಿಸಿ ಭಗವಂತನ ಮುಖದಲ್ಲಿ ರಮಿಸುತ್ತ, ಅದರ ಮೂಲಕ ಹೊರಡುವ ಗಾನವನ್ನು ಆಸ್ವಾದಿಸುತ್ತಿರುವಳೆಂದು[10] ಅನುಸಂಧಾನ ಮಾಡಬೇಕು.

ಹಾಗೆಯೇ ಭಗವಂತನ ಆಭರಣಗಳಲ್ಲಿ, ಅವನ ರೂಪಗಳು ಇರುವವಲ್ಲದೆ,

---

1 ಗದಾ ತು ವಾಯುರ್ಬಲಸಂವಿದಾತ್ಮಾ —ಮ. ಭಾರ. ತಾ. ನಿ. 3-76

2 ತ್ವಂ ತಿಗ್ಮಧಾರಾಸಿವರ....ಛಿಂದಿ 6-8-26

3 ....ಪ್ರತ್ಯೂಷ ಈಶೋऽಸಿಧರೋ ಜನಾರ್ದನಃ 6-8-22

4 ಚಕ್ಷೂಂಷಿ ಚರ್ಮನ್ ಶತಚಂದ್ರ ಛಾದಯ.... 6-8-26

5 ದುರ್ಗಾತ್ಮಿಕಾ ಸೈವ ಚ ಚರ್ಮನಾಮ್ನೀ.... —ಮ.ಭಾರ.ತಾ.ನಿ. 3-77

6 ಮಾಮುಗ್ರಧನ್ವಾ ಅಖಿಲಪ್ರಮಾದಾನ್ನಾರಾಯಣಃ.... 6-8-16

7 ದೇವೋऽಪರಾಹ್ಣೇ ಮಧುಹೋಗ್ರಧನ್ವಾ —6-8-21

8 ....ಶಾರ್ಙ್ಗಶ್ಚ ವಿದ್ಯೇತಿ ರಮೈವ —ಮ. ಭಾರ. ತಾ. ನಿ. 3-77

9 ....ಪಂಚಾತ್ಮಕೋ ಮಾರುತ ಏವ ಬಾಣಃ —ಮ.ಭಾರ.ತಾ.ನಿ. 3-77

10 ಗೋವಿಂದ ಆಸಂಗವ ಆತ್ತವೇಣುಃ 6-8-20

ಬ್ರಹ್ಮಾದಿದೇವತೆಗಳು ಆಯಾ ಆಭರಣ ರೂಪವನ್ನು ತಾಳಿರುತ್ತಾರೆ.[1]

ಲಕ್ಷ್ಮೀದೇವಿ ಶ್ರೀವತ್ಸ ಎನಿಸಿದರೆ, ಚತುರ್ಮುಖ ಕೌಸ್ತುಭ ಆಗಿರುವನು.[2] ವಾಯುದೇವ ಚೂಡಾಮಣಿ ಆಗಿರುವನು.[3] ಭಗವಂತನ ಆಭರಣಗಳಿಂದ ರಕ್ಷಣೆಯನ್ನು ಪ್ರಾರ್ಥಿಸುವಾಗ[4] ಆ ಆಭರಣಗಳ ರೂಪದಲ್ಲಿರುವ ದೇವತೆಗಳ ಅನುಸಂಧಾನ ಮಾಡಿಕೊಳ್ಳಬೇಕು.

ಭಗವಂತನ ವಾಹನನಾಗಿರುವ ಗರುಡನಿಂದ ರಕ್ಷಣೆಯನ್ನು ಪ್ರಾರ್ಥಿಸುವಾಗ[5] ಹಾಗೂ ಹರಿನಾಮಕರೂಪ ಗರುಡಾರೂಢನಾಗಿದ್ದಾನೆ ಎಂದು ಗರುಡನ ಉಲ್ಲೇಖ ಬರುವಾಗ,[6] ಗರುಡನಲ್ಲಿ ಭಗವಂತನ ವೈನತೇಯ ಎಂಬ ವಿಭೂತಿರೂಪ ಇದೆ ಎಂದೂ,[7] ಗರುಡನು ವೇದಕ್ಕೆ ಅಭಿಮಾನಿಯಾಗಿದ್ದು 'ವೇದ ಪುರುಷ' ಎನಿಸಿರುವನೆಂದೂ,[8] ಮನೋಭಿಮಾನಿಗಳಲ್ಲಿ ಒಬ್ಬನಾಗಿರುವನೆಂದೂ[9] ಅನುಸಂಧಾನ ಮಾಡಿಕೊಳ್ಳಬೇಕು.

---

1 ....ಸುರಾ ಇತರಭಾಂಡಗಾಃ –ತಂತ್ರ ಭಾಗವತೇ (ಭಾಗ.ತಾ.ನಿ. 10-19-10)

* ಇತರೇಷು ಭಾಂಡೇಷು ಕೌಸ್ತುಭಾದಿಭೂಷಣೇಷು ಬ್ರಹ್ಮಾದಿಸುರಾಃ ಸ್ಥಿತಾಃ
—ಬ.ಗೋ.

2 ಶ್ರೀ ವತ್ಸಃ ಪ್ರಕೃತಿರ್ಜ್ಞೇಯಾ ಬ್ರಹ್ಮಾಖ್ಯಃ ಕೌಸ್ತುಭಃ ಪುಮಾನ್ ।
—ಭಾಗವತತಂತ್ರ (ಭಾಗ. ತಾ. ನಿ. 3-29-27)

* ಸ ಚ ಬ್ರಹ್ಮಾ ಹರೇಃ ಕಂಠೇ ಕೌಸ್ತುಭತ್ವೇನ ಭಾಸತೇ ।
— ಭಾಗವತತಂತ್ರ (ಭಾಗ. ತಾ. ನಿ. 3-29-27)

3 ಕೌಸ್ತುಭೋ ಬ್ರಹ್ಮಣೋ ರೂಪಂ ಪ್ರಾಣಶ್ಚೂಳಾಮಣಿಸ್ತಥಾ
—ಭಾಗ. ತಾ. ನಿ. 3-16-39

4 ಭೂಷಣಾಯುಧಲಿಂಗಾಖ್ಯಾ.... 6-8-32

5 ಗರುಡೋ ಭಗವಾನ್....ರಕ್ಷತು 6-8-29

6 '....ನ್ಯಸ್ತಾಂಘ್ರಿಪದ್ಮಃ ಪತಗೇಂದ್ರಪೃಷ್ಠೇ' 6-8-12

7 ....ವೈನತೇಯಶ್ಚ ಪಕ್ಷಿಣಾಮ್ —ಗೀ. 10-30

8 ಸರ್ವವೇದಾಭಿಮಾನ್ಯೇವ ಗರುಡೋ ವೇದಪೂರುಷಃ
— ಐ. ಉ. ಭಾ. 2-8-3-1

9 ....ಶಂಕರಃ । ಶೇಷಃ ಸುಪರ್ಣ ಇಂದ್ರಶ್ಚ ಮನಾಂಸ್ಯೇವ ಪೃಥಕ್ ಪೃಥಕ್
— ಐ. ಉ. ಭಾ. 1-4-4



## ಕಾಲವಿಶೇಷಗಳಲ್ಲಿ ರೂಪವಿಶೇಷಗಳಿಂದ ರಕ್ಷಣೆ :

ಹಗಲುರಾತ್ರಿಗಳನ್ನೊಳಗೊಂಡ ಸಮಗ್ರದಿನದಲ್ಲಿ ಹನ್ನೆರಡು ಭಾಗಗಳನ್ನು ಗುರುತಿಸಿ, ಅವುಗಳಲ್ಲಿಯ ಒಂದೊಂದು ಭಾಗದಲ್ಲಿ ಭಗವಂತನ ಕೇಶವಾದಿ ರೂಪಗಳಿಂದ ರಕ್ಷಣೆಯನ್ನು ಪ್ರಾರ್ಥಿಸಲಾಗಿದೆ.

ಹೀಗೆ ನಾರಾಯಣವರ್ಮದಲ್ಲಿ ತೋರಿಸಲಾದ ಕಾಲವಿಭಾಗಗಳನ್ನೂ, ಅವುಗಳಲ್ಲಿ ರಕ್ಷಣೆ ನೀಡುವ ಭಗವದ್ರೂಪಗಳನ್ನು, ಅವು ಧರಿಸಿವೆ ಎಂದು [ಕೆಲವು ರೂಪಗಳಲ್ಲಿ ಮಾತ್ರ] ಉಲ್ಲೇಖಿಸಲಾದ ಆಯುಧಗಳನ್ನೂ ಸಂಗ್ರಹಿಸಿ ಹೀಗೆ ವಿವೇಚಿಸಲಾಗಿದೆ—

| ಉಲ್ಲೇಖಿಸಲಾದ ಕಾಲ ವಿಭಾಗ | ಅದರ ಪರಿಚಯ | ರಕ್ಷಿಸುವ ಭಗವದ್ರೂಪ | ಮತ್ತು ಧರಿಸಿರುವ ಅಸ್ತ್ರ |
|---|---|---|---|
| 1. ಪ್ರತ್ಯೂಷ | ಮೊದಲಿನ ಅವಧಿ ಬೆಳಿಗ್ಗೆ ಆಗುವ (3–00ರಿಂದ 4–30) | ಜನಾರ್ದನ (ತ್ರಿವಿಕ್ರಮ) | ಕತ್ತಿ |
| 2. ಪ್ರಾತಃ | ಬೆಳಿಗ್ಗೆ ಬೇಗ (4–30ರಿಂದ... ) | ಕೇಶವ | ಗದಾ |
| 3. ಪ್ರಾಹ್ಣ | ನಡು ಬೆಳಿಗ್ಗೆ (6–00 ಗಂಟೆ) | ನಾರಾಯಣ | ಶಕ್ತಿ |
| 4. ಪ್ರಭಾತ | ಬೆಳಗಂ ಹರಿದ ಮೇಲೆ (7–00ರ ಮೇಲೆ) | ವಾಮನ | — |
| 5. ಮಧ್ಯಂದಿನ | ಮಧ್ಯಾಹ್ನ (12–00) | ವಿಷ್ಣು | ಚಕ್ರ |
| 6. ಅಪರಾಹ್ಣ | ಹಗಲಿನ ಬಳಿಕ | ಮಧುಸೂದನ | ಧನುಸ್ಸು |
| 7. ಅನುಸಂಧ್ಯ | ಸಂಜೆ ಬೇಗ [4–30] | ದಾಮೋದರ | — |
| 8. ಸಾಯಂ. | ನಡು ಸಂಜೆ (6–00) | ಮಾಧವ | — |
| 9. ಆಸಂಗವ | ಸಂಜೆ ತಡವಾಗಿ (7–00) | ಗೋವಿಂದ | ಕೊಳಲು |

| | | | |
|---|---|---|---|
| 10. ರಾತ್ರಿ | ರಾತ್ರಿಯಲ್ಲಿ (7–30ರ ಬಳಿಕ) | ಹೃಷೀಕೇಶ | — |
| 11. ಅರ್ಧರಾತ್ರ | ನಡುರಾತ್ರಿ (12-00) | ಪದ್ಮನಾಭ | — |
| 12. ಅಪರರಾತ್ರ | ನಡುರಾತ್ರಿಯ ಬಳಿಕ (12–00ರ ಬಳಿಕ 3–00ರವರೆಗೆ) | ಶ್ರೀಧರ | — |

ಹೀಗೆ ಕೇಶವಾದಿ ರೂಪಗಳಲ್ಲಿ ಅವುಗಳ ಒಡೆತನಕ್ಕೆ ಸೇರಿದ ಕಾಲವಿಭಾಗದಲ್ಲಿ ಯಾವುದೇ ರೀತಿಯ ಆಪತ್ತು ಬಂದೊದಗದಂತೆ, ಆಯಾ ಕಾಲಕ್ಕೆ ಆಹಾರಾದಿಗಳು ದೊರಕುವಂತೆ ಹಾಗೂ ಆಯಾ ಕಾಲದಲ್ಲಿ ನಡೆಸಬೇಕೆಂದು ಶಾಸ್ತ್ರದಲ್ಲಿ ವಿಧಿಸಲ್ಪಟ್ಟ ಸಾಧನೆಗಳನ್ನು ಆಚರಿಸಲು ಅನುಕೂಲವಾಗುವಂತೆ ರಕ್ಷಣೆ ನೀಡಲು ಪ್ರಾರ್ಥಿಸಿಕೊಳ್ಳಬೇಕು.

ಛಾಂದೋಗ್ಯೋಪನಿಷತ್ತಿನಲ್ಲಿ (2–1–9) ಸೂರ್ಯೋದಯದ ಪೂರ್ವಕಾಲ, ಸೂರ್ಯೋದಯದ ಪ್ರಥಮ ಕಾಲ ಸಂಗವಕಾಲ ಮಧ್ಯಾಹ್ನ, ಅದರ ನಂತರ ಅಪರಾಹ್ಣದ ವರೆಗಿನ ಅವಧಿ, ಅದರ ಬಳಿಕ ಅಸ್ತಮಯದವರೆಗಿನ ಅವಧಿ, ಸೂರ್ಯಾಸ್ತಮಯದ ಪ್ರಥಮಕಾಲ–ಹೀಗೆ ಹಗಲಿಗಷ್ಟೇ ಸಂಬಂಧಪಟ್ಟಂತೆ ಏಳು ಅವಧಿಗಳನ್ನು ಉಲ್ಲೇಖಿಸಿ, ಅವುಗಳಲ್ಲಿ ಪ್ರದ್ಯುಮ್ನ, ವಾಸುದೇವ, ವರಾಹ, ನಾರಾಯಣ, ಅನಿರುದ್ಧ, ನರಸಿಂಹ ಹಾಗೂ ಸಂಕರ್ಷಣ ರೂಪಗಳಿಂದ ರಕ್ಷಿಸಲಾಗುವುದೆಂದು ಪ್ರತಿಪಾದಿಸಲಾಗಿದೆ.

ಆದರೆ ಭಗವದ್ರೂಪಗಳಲ್ಲಿ ಪರಸ್ಪರವಾಗಿ ವೈಲಕ್ಷಣ್ಯವಿಲ್ಲದಿರುವುದರಿಂದ, ಒಂದೆಡೆ ಕೇಶವಾದಿ ರೂಪಗಳಿಂದ ರಕ್ಷಣೆ ನೀಡುವನೆಂದೂ, ಮತ್ತೊಂದೆಡೆ ತ್ರಿವಿಕ್ರಮಾದಿ ರೂಪಗಳಿಂದ ರಕ್ಷಣೆ ನೀಡುವನೆಂದೂ ನಿರೂಪಿತವಾಗಿದ್ದರೂ ವಿರೋಧವಿಲ್ಲ. ಬೇರೆ ಬೇರೆ ಅಧಿಕಾರಿಗಳು ತಮ್ಮ ತಮ್ಮ ಯೋಗ್ಯತೆಗನುಗುಣವಾಗಿ ಬೇರೆ ಬೇರೆ ಭಗವದ್ರೂಪಗಳ ಅನುಸಂಧಾನ ನಡೆಸಬೇಕಾದುದರಿಂದ. ಹೀಗೆ ಬೇರೆ ಬೇರೆ ರೂಪಗಳ ಅನುಸಂಧಾನ ನಡೆಸುವುದರಿಂದ ಫಲವಿಶೇಷವು ದೊರಕುವುದರಿಂದ ಬೇರೆ ಬೇರೆ ಗ್ರಂಥದಲ್ಲಿ ಬೇರೆ ಬೇರೆಯಾಗಿಯೇ ನಿರೂಪಿತವಾಗಿದೆಯಷ್ಟೇ.[1] ಆದ್ದರಿಂದ ವಾಸ್ತವದೃಷ್ಟಿಯಿಂದ ಏನೂ ವಿರೋಧವಿರಲಾರದು.

---

1 ಪ್ರತಿಪತ್ತೃಭೇದೇನ....ಫಲವೈಲಕ್ಷಣ್ಯಾದ್ವಾ, ಭಗವದ್ರೂಪೇಷು ವಿಶೇಷಾ-ಭಾವಾದ್ವಾ ದ್ವೈಸರಣ್ಯಮ್ —ಸತ್ಯ

## ವಿಶೇಷಣಗಳ ಔಚಿತ್ಯ :

ವಿಶೇಷ್ಯದಲ್ಲಿರುವ ಗುಣಧರ್ಮಗಳನ್ನು ಉಲ್ಲೇಖಿಸುತ್ತಿರುವ ವಿಶೇಷಣಗಳು ಕೆಲವೊಮ್ಮೆ ವಿಶೇಷ್ಯದಲ್ಲಿ ಇಂತಹ ಗುಣಧರ್ಮಗಳಿವೆ—ಎಂಬ ಮಾಹಿತಿಯನ್ನು ಒದಗಿಸುವುದಕ್ಕಾಗಿಯಷ್ಟೇ 'ಸ್ವರೂಪಸಂಕೀರ್ತನ' ರೀತಿಯಲ್ಲಿ ಪ್ರಯೋಗಿಸಲ್ಪಟ್ಟಿದ್ದರೆ, ಮತ್ತೆ ಕೆಲವೊಮ್ಮೆ ತಾತ್ಕಾಲಿಕ ಸಂದರ್ಭಕ್ಕೆ ಪುಷ್ಟಿ ನೀಡುವ, ವಿಶೇಷ್ಯದ ವ್ಯಕ್ತಿತ್ವದ ಯಾವುದಾದರೊಂದು ಅಂಶವನ್ನು ಎತ್ತಿ ತೋರಿಸಿಕೊಡುವುದಕ್ಕಾಗಿಯೇ ಬಳಸಲ್ಪಡುವವು.

"ನಾರಾಯಣವರ್ಮ"ದಲ್ಲಿ ಬೇರೆ ಬೇರೆ ಭಗವದ್ರೂಪಗಳನ್ನು ಉಲ್ಲೇಖಿಸುವಾಗ ಅವುಗಳಿಗೆ ನೀಡಲಾದ ವಿಶೇಷಣಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ ಆಯಾ ಸಂದರ್ಭಕ್ಕೆ ಪುಷ್ಟಿ ನೀಡುವ ಯಾವುದಾದರೊಂದು ಅಂಶದ ಪ್ರಕಟಣೆಗಾಗಿ ಆ ವಿಶೇಷಣ ಪ್ರಯೋಗಿಸಲ್ಪಟ್ಟಿದೆ—ಎಂಬುದು ಸ್ಪಷ್ಟವಾಗದಿರದು.

### ಅಷ್ಟಗುಣ :

ನಾರಾಯಣವರ್ಮದಲ್ಲಿ ಮೊತ್ತ ಮೊದಲು ಉಲ್ಲೇಖಿಸಲ್ಪಡುವ ರೂಪಕ್ಕೆ 'ಅಷ್ಟಗುಣಃ' —ಎಂಬ ವಿಶೇಷಣವನ್ನು ನೀಡುವುದರ ಮೂಲಕ ಸೃಷ್ಟಿಸುವುದು, ಪಾಲಿಸುವುದು, ಸಂಹರಿಸುವುದು, ನಿಯಂತ್ರಿಸುವುದು, ಜ್ಞಾನವನ್ನು ನೀಡುವುದು, ಅಜ್ಞಾನವನ್ನು ನೀಡುವುದು, ಸಂಸಾರಬಂಧನವನ್ನು ನೀಡುವುದು ಹಾಗೂ ಬಿಡುಗಡೆಗೊಳಿಸುವುದು— ಈ ಎಂಟು ಅವನ ಗುಣಗಳನ್ನು ಉಲ್ಲೇಖಿಸಲಾಗಿದೆ.

ಜಗತ್ತಿಗೆ ಸಂಬಂಧಿಸಿದಂತೆ ವೃದ್ಧಿಯನ್ನೀಯುವುದೇ ಮುಂತಾದ ಇನ್ನೂ ಅನೇಕ ಗುಣಗಳನ್ನೂ ಹೇಳಬಹುದು. ಆದರೆ 'ಸೃಷ್ಟಿರಕ್ಷಾಹತಿಜ್ಞಾನನಿಯತ್ಯಜ್ಞಾನಬಂಧನಾನ್ । ಮೋಕ್ಷಂ ಚ ವಿಷ್ಣುತಸ್ತ್ವೇವ ಜ್ಞಾತ್ವಾ ಮುಕ್ತಿರ್ನ ಚಾನ್ಯಥಾ' ಎಂದು ಮಹಾಭಾರತತಾತ್ಪರ್ಯ ನಿರ್ಣಯದಲ್ಲಿ (1-84) ಸಾಧಕನು ಮುಕ್ತಿ ಹೊಂದಬೇಕಾದರೆ ಜಗತ್ತಿನ ಸೃಷ್ಟ್ಯಾದಿ ಎಂಟು ಅವಸ್ಥೆಗಳು ಭಗವಂತನಿಂದಲೇ ನಡೆಯುವವೆಂದು ಅವಶ್ಯವಾಗಿ ತಿಳಿದುಕೊಳ್ಳಬೇಕೆಂದು ಸಂದೇಶಿಸಿರುವುದಕ್ಕೆ ಅನುಗುಣವಾಗಿ ಆ ಎಂಟು ಗುಣಗಳ ಅನುಸಂಧಾನಕ್ಕೆ ಪುಷ್ಟಿ ದೊರೆಯುವಂತೆ 'ಅಷ್ಟಗುಣಃ' ಎಂಬ ವಿಶೇಷಣವನ್ನು ನೀಡಲಾಗಿದೆ.

### ಅಷ್ಟಾಯುಧಗಳ ಧಾರಣೆಯ ಉಲ್ಲೇಖ :

ಭಗವಂತನು ಯಾವುದನ್ನೂ ಸಂಕಲ್ಪ ಮಾತ್ರದಿಂದಲೇ, ದೈಹಿಕವಾಗಿಯೇ ನಡೆಸಲು ಸಮರ್ಥನಾದರೂ ಲೀಲೆಯಿಂದ ಆಯುಧಗಳನ್ನು ಧರಿಸು

ವನು.[1] ತಾನು ಜಗತ್ತಿನ ರಕ್ಷಣೆಯಲ್ಲಿ ಸರ್ವದಾ ತೊಡಗಿರುವವನೆಂದು ಸಾಧಕರ ಅನುಸಂಧಾನಕ್ಕೆ ಪುಷ್ಟಿ ನೀಡುವ ಉದ್ದೇಶದಿಂದ ಅವನು ಯಾವಾಗಲೂ ಶಂಖ ಚಕ್ರಾದಿ ಆಯುಧಗಳನ್ನು ಧರಿಸಿಕೊಂಡು ಇರುವನು.[2]

ಮಂತ್ರಗಳಿಂದ ಧ್ಯೇಯವಾದ ಭಗವನ್ಮೂರ್ತಿಗೆ ಎರಡೋ, ನಾಲ್ಕೋ ಕೈ ಗಳೆಂದೇನೂ ನಿಯಮವಿಲ್ಲ. ಎರಡರಿಂದ ಪ್ರಾರಂಭಿಸಿ ಅನಂತ ಸಂಖ್ಯೆಯಲ್ಲಿ ಅವನಿಗೆ ಹಸ್ತಗಳಿವೆ ಎಂದು ಧ್ಯಾನಿಸಬಹುದು. ಚಕ್ರ, ಶಂಖ, ಗದೆ, ಪದ್ಮ, ಖಡ್ಗ, ಗುರಾಣಿ ಬಿಲ್ಲು, ಬಾಣ, ಒನಕೆ, ವಜ್ರಾಯುಧ, ನೇಗಿಲು, ಪಾಶ, ಅಂಕುಶ, ಶೂಲ, ಎಸೆಯೀಟಿ, ಯುದ್ಧದ ಕೊಡಲಿ ಮೊದಲಾದ ಆಯುಧ ಗಳನ್ನೋ ಬೆಂಕಿಯಂತಹ ಭಯಾನಕ ವಸ್ತುವನ್ನೋ, ವರಮುದ್ರೆ ಅಭಯಮುದ್ರೆ ಗಳನ್ನೋ ತತ್ತ್ವಮುದ್ರೆಯನ್ನೋ, ಪದ್ಮಾಕ್ಷದ ಮಾಲೆಯನ್ನೋ, ಪುಸ್ತಕವನ್ನೋ, ಇನ್ನೂ ಯಾವುದೇ ಆಯುಧಗಳನ್ನೂ ಶ್ರೀಹರಿ ತನ್ನ ಕೈಗಳಲ್ಲಿ ಹಿಡಿದುಕೊಂಡಿರು ವಂತೆ ಧ್ಯಾನಿಸಬಹುದು. ಎರಡೂ ಕೈಗಳಿಂದ ಶತ್ರುವನ್ನು ಬಗಿಯುತ್ತಿರುವಂತೆಯೂ ನೃಸಿಂಹಾದಿರೂಪಗಳನ್ನೂ ಧ್ಯಾನಿಸಬಹುದು—ಎಂದು ಶ್ರೀವೇದಾಚಾರ್ಯರು ಸಂದೇಶಿಸಿರುವರು.[3]

ಪ್ರಕೃತ ಶಂಖ, ಚಕ್ರ, ಚರ್ಮ, ಖಡ್ಗ, ಗದಾ, ಬಾಣ, ಬಿಲ್ಲು ಹಾಗೂ ಹಗ್ಗ ಈ ಎಂಟು ಆಯುಧಗಳನ್ನು ಧರಿಸಿರುವನೆಂದು ಧ್ಯಾನಿಸಬೇಕಲ್ಲದೆ, ಈ ಆಯುಧಗಳ ಧಾರಣೆಯಿಂದ 'ಅಷ್ಟಗುಣಃ' ಎಂಬ ವಿಶೇಷಣದಿಂದ ಹೇಳಲಾದ ಸೃಷ್ಟ್ಯಾದಿ ಎಂಟು ಗುಣಗಳ ಸೂಚನೆ ದೊರಕುವುದೆಂದು ಅನುಸಂಧಾನ ಮಾಡ ಬಹುದಾಗಿದೆ.

---

1 ಯಥೇಚ್ಛಯೈವ ಸರ್ವಂ ತು ಮನಸಾ ದೇಹತೋಽಪಿ ವಾ । ಕರ್ತುಂ ಶಕ್ತೋಽಪಿ ಚಾಸ್ತ್ರಾದ್ಯಾ ಲೀಲೈವಾನಂತಶಕ್ತಿನಃ ।
—ವಾರಾಹೇ (ಭಾಗ. ತಾ. ನಿ. 3-20-5)

2 ಶಂಖಚಕ್ರಗದಾಪದ್ಮಧರಾಶ್ಚಿಂತ್ಯಾ ಹರೇರ್ಭುಜಾಃ । ಪೀನವೃತ್ತಾ ಜಗದ್ರಕ್ಷಾ-ಕೇವಲೋದ್ಯೋಗಿನೋಽನಿಶಮ್—ಇತಿ ದ್ವಾದಶಸ್ತೋತ್ರಸ್ಯ ಜಗದ್ರಕ್ಷೇತ್ಯಾದಿ ವಿಶೇಷಣೇನ ಏತತ್ ಸೂಚಿತಂ ಭವತಿ ।

3 'ಸರ್ವೇಷ್ವಪಿ ಹಿ ಮಂತ್ರೇಷು ದ್ವ್ಯಾದ್ಯನಂತಾನಂತಬಾಹುಕಃ ।....ಧ್ಯೇಯೋಽತಃ ....ಯಥಾಯೋಗ್ಯಂ ಯಥಾಶಕ್ತಿ ತತ್ತದಾಯುಧಭೂಷಣಃ । ಚಕ್ರಶಂಖ-ಗದಾಪದ್ಮಖಡ್ಗಖೇಟಾಃ ಸಶಾರ್ಙ್ಗಕಾಃ । ಶರೋ ಮುಸಲವಜ್ರೌ ಚ ಹಲು; ಪಾಶಾಂಕುಶೌ ತಥಾ । ಶೂಲಂ ಚ ಭಿಂಡಿಪಾಲಶ್ಚ ಪಟ್ಟಸೋಽಗ್ನಿರ್ವರಾಭಯೇ । ತತ್ತ್ವಮುದ್ರಾಕ್ಷಮಾಲಾ ಚ ಪುಸ್ತಕಂ ಚ ವಿದಾರಣಮ್ । ಇತ್ಯಾದೀನ್ಯಖಿಲಾನ್ಯೇವ ವಿಷ್ಣೋಶ್ಚಿಂತ್ಯಾನಿ ಬಾಹುಷು' —ತಂ. ಸಾ. ಸಂ. 4-16....19

ತನ್ನ ಮೂಲಕ ಬಾಣಗಳನ್ನು ಹೊರಡಿಸಬಲ್ಲ ಬಿಲ್ಲು ಭಗವಂತನ ಉದರದಿಂದ ಹೊರಹೊಮ್ಮಿಸುವ ಸೃಷ್ಟ್ಯತ್ವ ಗುಣವನ್ನು ಸಂಕೇತಿಸುವುದು, ಸತ್ವಗುಣಕ್ಕೆ ಅಭಿಮಾನಿನಿಯಾದ ಶ್ರೀದೇವಿಯೇ ಅವನ ಶಂಖ ಆಗಿದ್ದು, ಅಂತಹ ಶಂಖ ಸತ್ವಗುಣದ ಮೂಲಕ ನಡೆಯುವ ಪಾಲಕತ್ವಗುಣವನ್ನು ಸಂಕೇತಿಸುವುದು. ತಮೋऽಭಿಮಾನಿನಿಯಾದ ದುರ್ಗೆ ಸುದರ್ಶನ ಚಕ್ರ ಆಗಿದ್ದು ತಮಸ್ಸಿನ ಮೂಲಕ ನಡೆಯಬೇಕಾದ ಸಂಹಾರಕತ್ವಗುಣವನ್ನು ಜ್ಞಾಪಿಸಿಕೊಡಬಲ್ಲದು. ವಾಯುದೇವನೇ ಅವನ ಬಾಣವಾಗಿದ್ದು, ವಾಯುದೇವನ ಮೂಲಕ ನಡೆಯುವ ಬೇರೆ ಬೇರೆ ಚಟುವಟಿಕೆಗಳಲ್ಲಿ ತೊಡಗಿಸುವ ನಿಯಮನಗುಣವು ಬಾಣದಿಂದ ಸಂಕೇತಿಸಲ್ಪಡುವುದು. ಜ್ಞಾನಾಭಿಮಾನಿ ವಾಯುದೇವನೇ ಅವನ ಗದೆ ಆಗಿದ್ದು, ಅಂತಹ ಗದೆ ಅವನ ಜ್ಞಾನಪ್ರದಾನ ಗುಣವನ್ನು ಸೂಚಿಸಿಕೊಡುವುದು. ತಮೋऽಭಿಮಾನಿನಿ ದುರ್ಗೆಯೇ ಅವನ ಗುರಾಣಿ ಆಗಿದ್ದು, ಅದು ತಮೋಗುಣದ ಮೂಲಕ ನಡೆಯುವ ಅಜ್ಞಾನಪ್ರದಾನಗುಣವನ್ನು ಸಂಕೇತಿಸುವುದು. ಪಾಶವು ಸಂಸಾರ ಬಂಧಕತ್ವಗುಣವನ್ನು ಸೂಚಿಸಿದರೆ, ಖಡ್ಗವು ಸಂಸಾರಬಂಧನದಿಂದ ಬಿಡುಗಡೆಗೊಳಿಸಿ ಮೋಕ್ಷವನ್ನು ಅನುಗ್ರಹಿಸುವ ಗುಣವನ್ನು ಸಂಕೇತಿಸುವುದು.

**ಗರುಡಾರೋಹಣದ ಸಂಕೇತ :**

ಭಗವಂತನ ಹರಿರೂಪವು ಗರುಡನ ಬೆನ್ನ ಮೇಲೆ ಕುಳಿತುಕೊಂಡಿದೆ—ನ್ಯಸ್ತಾಂಘ್ರಿಪದ್ಮಃ ಪತಗೇಂದ್ರಪೃಷ್ಠೇ—ಎಂದು ನಿರೂಪಿಸಲಾಗಿದೆ. "ವೇದಪುರುಷ"—ಎಂದೇ ಪ್ರಸಿದ್ಧನಾಗಿರುವ ಗರುಡನು ಸಕಲ ವೇದಗಳಿಗೆ ಅಭಿಮಾನಿ. ಅಂತಹ ಗರುಡನ ಬೆನ್ನ ಮೇಲೆ ಹರಿರೂಪದ ಪದನ್ಯಾಸ ನಡೆದಿದೆ — ಎಂದರೆ ಗರುಡನಿಂದ ಅಭಿಮನ್ಯಮಾನವಾದ ಸಕಲ ವೇದದಲ್ಲಿ ಭಗವಂತನ ಸ್ವರೂಪದ ಪ್ರತಿಪಾದನ ಇದೆ ಎಂದರ್ಥ.

**ಮಾಯಾವಟು ವಾಮನ :**

ವಾಮನರೂಪದ ಪ್ರಸ್ತಾವದಲ್ಲಿ ಅವನಿಗೆ "ಮಾಯಾವಟು"—ಎಂಬ ವಿಶೇಷಣವನ್ನು ನೀಡುವುದರ ಮೂಲಕ ಅವನ ವಟು ರೂಪದ ಧಾರಣೆ ಮಾಯಾ ಎನಿಸುವ ಅವನ ಇಚ್ಛೆಗನುಗುಣವಾದದ್ದೇ ಹೊರತು ಪ್ರಾರಬ್ಧಕರ್ಮಾನುಗುಣವಾದದ್ದಲ್ಲ—ಎಂದು ಸೂಚಿಸಲ್ಪಟ್ಟಿದೆ.

**ವಿಶ್ವರೂಪ :**

ತ್ರಿವಿಕ್ರಮನಿಗೆ "ವಿಶ್ವರೂಪ" ಎಂಬ ವಿಶೇಷಣವನ್ನು ನೀಡಿ, ಹದಿನಾಲ್ಕು

ಲೋಕಗಳಲ್ಲೂ ಪ್ರವೇಶಿಸಿದ್ದರಿಂದ ವಿಶ್ವರೂಪ ಎನಿಸಿರುವ[1] ಅವನಿಗೆ ಇಡೀ ವಿಶ್ವವೇ ಪ್ರತಿಮೆಯಾಗಿ ಇರವುದರಿಂದಲೂ ಅವನು "ವಿಶ್ವರೂಪ"[2]. ಹೀಗೆ ಆಕಾಶದಲ್ಲೂ ವ್ಯಾಪಿಸಿರುವ ಅವನಿಂದ, ಅಲ್ಲಿಯ ರಕ್ಷಣೆಯನ್ನು ಕೇಳಿಕೊಂಡಿರುವುದು ಸಮುಚಿತ ವಾದುದು—ಎಂದು ಸಮರ್ಥಿಸಲಾಗಿದೆ.

**ನರಸಿಂಹನ ಪ್ರಭುತ್ವದ ಸಮರ್ಥನೆ:**

ಅರಣ್ಯಾದಿಗಳಲ್ಲಿ ರಕ್ಷಣೆ ನೀಡುವ ಸಾಮರ್ಥ್ಯ ನರಸಿಂಹನಲ್ಲಿ ಇದೆ–ಎಂದು ಅನುಸಂಧಾನದಲ್ಲಿ ತಂದುಕೊಳ್ಳುವುದಕ್ಕಾಗಿಯೇ ಅವನಿಗೆ 'ಪ್ರಭುಃ'—ರಕ್ಷಣೆ ನೀಡು ವುದಕ್ಕೆ ಸರ್ವಸಮರ್ಥನಾದವನು—ಎಂಬ ವಿಶೇಷಣ ಕೊಟ್ಟು, ಮುಂದಿನ ಮಾತು ಗಳಿಂದ ಅದನ್ನು ಸಮರ್ಥಿಸಲಾಗಿದೆ. ಅಸುರರ ಸಮುದಾಯಕ್ಕೆ ಒಡೆಯನಾಗಿದ್ದ ಹಿರಣ್ಯಕಶಿಪುವಿಗೆ ಶತ್ರುವಾಗಿದ್ದ ನರಸಿಂಹನ ಅಟ್ಟಹಾಸವೇ ಶತ್ರು ಸ್ತ್ರೀಯರ ಗರ್ಭ ಪಾತಕ್ಕೆ ಕಾರಣವಾಗಿತ್ತೆಂದರೆ ಅವನೆಷ್ಟು ಪರಾಕ್ರಮಿಯಾಗಿರಬೇಕು! — ಎಂದು.

ಉಪಸಂಹಾರದ ಪದ್ಯದಲ್ಲೂ (೩೪) ಅವನ ಗರ್ಜನೆಗೇ ಲೋಕಭಯಪರಿ ಹಾರಕತ್ವವನ್ನು ಹೇಳುವುದರ ಮೂಲಕ ಭಯಪರಿಹಾರಕತ್ವದಲ್ಲಿ ಅವನ ಪ್ರಭಾವಾತಿ ಶಯವನ್ನು ಸೂಚಿಸಲಾಗಿದೆ. ತನ್ನ ತೇಜಸ್ಸಿನಿಂದ ಉಳಿದ ತೇಜಸ್ವಿ ಪದಾರ್ಥಗಳ ತೇಜಸ್ಸನ್ನು ಮಸುಕು ಮಾಡುವ ಮಹಿಮೆಯನ್ನು ಉಲ್ಲೇಖಿಸಿ, ದಿಕ್ಕು ವಿದಿಕ್ಕು ಗಳಲ್ಲಿ ರಕ್ಷಣೆ ನೀಡಬಲ್ಲ ಸಾಮರ್ಥ್ಯವನ್ನು ಸೂಚಿಸಲಾಗಿದೆ.

**ಸಾಮರ್ಥ್ಯ ಮತ್ತು ಭಕ್ತವಾತ್ಸಲ್ಯ:**

ವರಾಹನಲ್ಲಿ ಪ್ರಾರ್ಥಿಸುವಾಗ "ಯಜ್ಞಕಲ್ಪ" ಎಂಬ ವಿಶೇಷಣವನ್ನು ನೀಡಿ ತನ್ನ ಅಂಗಾಂಗಗಳ ಮೂಲಕ ಯಜ್ಞದ ಸಾಧನಗಳನ್ನು ಅಭಿವ್ಯಕ್ತಗೊಳಿಸಿ ಯಜ್ಞ ವನ್ನು ರೂಪಿಸಿರುವ ಮಹಿಮೆಯನ್ನೂ ಭೂಮಿ ಒಮ್ಮೆ ತನ್ನಷ್ಟಕ್ಕೇ ಸಮುದ್ರದೊಳಗೆ ಕುಸಿದಾಗ, ಹಾಗೆಯೇ ಹಿರಣ್ಯಾಕ್ಷ ಬಲಾತ್ಕಾರವಾಗಿ ಭೂಮಿಯನ್ನು ಕುಸಿಯು ವಂತೆ ಮಾಡಿದಾಗ – ಹೀಗೆ ಎರಡು ಬಾರಿ ಭೂಮಿಯ ಉದ್ಧಾರ ನಡೆಸಿರುವ ಮಹಿಮೆಯನ್ನೂ ಉಲ್ಲೇಖಿಸಿ. ಅಂತಹ ಮಹಿಮೆಗಳನ್ನು ತೋರಲು ಬೇಕಾದ ಸಾಮರ್ಥ್ಯವನ್ನೂ, ಭಕ್ತವಾತ್ಸಲ್ಯವನ್ನೂ ಹೊಂದಿರುವ ವರಾಹ ತನ್ನ ಭಕ್ತರಿಗೆ ದಾರಿಯಲ್ಲಿ ಸಂಭವಿಸಬಹುದಾದ ಆಪತ್ತುಗಳಿಂದ ನಿಶ್ಚಿತವಾಗಿ ರಕ್ಷಣೆ ನೀಡಬಲ್ಲ— ಎಂದು ಸೂಚಿಸಲಾಗಿದೆ.

---

1 ವಿಶತಿ ಚತುರ್ದಶಲೋಕಾನಿತಿ ವಿಶ್ವಂ. ತಾದೃಶಂ ರೂಪಂ ಯಸ್ಯ ಸಃ ।

2 ವಿಶ್ವಂ ರೂಪಂ ಪ್ರತಿಮಾ ಯಸ್ಯ ಸಃ ವಿಶ್ವರೂಪಃ ।

**ಲಕ್ಷ್ಮಣ ಭರತರ ಸಾಹಿತ್ಯ :**

ಶ್ರೀ ರಾಮಚಂದ್ರನಿಂದ ರಕ್ಷಣೆಯನ್ನು ಪ್ರಾರ್ಥಿಸುವಾಗ ಅವನ ಭಕ್ತರಾದ ಲಕ್ಷ್ಮಣರೂಪದಲ್ಲಿರುವ ಶೇಷ ಹಾಗೂ ಭರತ ರೂಪದಲ್ಲಿರುವ ಕಾಮ ಇವರಿಂದಲೂ ಮತ್ತು ಇವರಲ್ಲಿ ಆವಿಷ್ಟನಾದ ಸಂಕರ್ಷಣ ಮತ್ತು ಪ್ರದ್ಯುಮ್ನನಾಮಕ ಭಗವಂತ ನಿಂದಲೂ ರಕ್ಷಣೆ ದೊರಕಬೇಕೆಂದು 'ಸಲಕ್ಷ್ಮಣಃ ಭರತಾಗ್ರಜಃ' ಎಂದು ಅವರಿಬ್ಬರ ಸಾಹಿತ್ಯವನ್ನೂ ಉಲ್ಲೇಖಿಸಲಾಗಿದೆ.

ಶ್ರೀರಾಮ ಲಕ್ಷ್ಮಣನ ಜೊತೆಗೇ ಇದ್ದು, ಭರತನಿಗೆ ಅಗ್ರಜನಾಗಿ ಅನುಗ್ರಹಿ ಸಿದಂತೆ ಎಲ್ಲ ಭಕ್ತರಿಗೂ ಅವರ ಜೊತೆಗೇ ಇದ್ದು ರಕ್ಷಣೆಯನ್ನು ಅನುಗ್ರಹಿಸುವ ನೆಂಬುದೂ ಸೂಚ್ಯವಾದ ಅಂಶ.

**ನಾರಾಯಣನ ಧನುಸ್ಸು :**

ಭಗವಂತನ ನಾರಾಯಣ ರೂಪ ವಿಶೇಷವಾಗಿ ತಪಸ್ಸಿನಲ್ಲಿ ತೊಡಗಿದ್ದುದು. ಆದುದರಿಂದ ಅಂತಹ ನಾರಾಯಣ ಧರಿಸಿರುವ ಉಗ್ರವಾದ ಧನುಸ್ಸೆಂದರೆ ಧನುಸ್ಸಿನ ರೂಪದಲ್ಲಿ ಇರುವ ವಿದ್ಯಾನಾಮಕಳಾದ ಲಕ್ಷ್ಮೀದೇವಿ. ಎಲ್ಲ ಬಗೆಯ ಪ್ರಮಾದ ಗಳಿಂದ ಆಕೆಯ ಮೂಲಕವೇ ರಕ್ಷಣೆ ನೀಡುವ ನಾರಾಯಣ ಈ ಹಿನ್ನಲೆಯಲ್ಲಿಯೇ 'ಉಗ್ರಧನ್ವಾ' ಎನಿಸುವುದು.

**ಯೋಗನಾಥ :**

ಮೋಕ್ಷೋಪಾಯಗಳಾದ ಯೋಗಗಳಿಗೆ ವಿರುದ್ಧವಾದವುಗಳಿಂದ ಅಥವಾ ಯೋಗಗಳನ್ನು ಅಳವಡಿಸಿಕೊಳ್ಳದಿರುವುದರಿಂದ ರಕ್ಷಣೆ ನೀಡಲು ಪ್ರಾರ್ಥಿಸಲ್ಪಡುವ 'ದತ್ತ'ನಿಗೆ 'ಯೋಗನಾಥ'—ಎಂಬ ವಿಶೇಷಣವನ್ನು ನೀಡಿ ಭಕ್ತಿ, ಜ್ಞಾನ, ಚಿತ್ತ ನಿರೋಧ ಮುಂತಾದ ಯೋಗಗಳ ವಿಷಯದಲ್ಲಿ ಬ್ರಹ್ಮಾದಿಗಳಿಂದ ಬೇಡಲ್ಪಡುವ ಯೋಗೀಶನಾದ ಅವನ ಯೋಗದ ವಿಷಯದಲ್ಲಿ ರಕ್ಷಣೆ ನೀಡುವ ಸಾಮರ್ಥ್ಯವನ್ನು ಸ್ಪಷ್ಟಗೊಳಿಸಲಾಗಿದೆ.

**ಗುಣೇಶ :**

ಕರ್ಮ ಬಂಧನದಿಂದ ರಕ್ಷಣೆಗಾಗಿ ಪ್ರಾರ್ಥಿತನಾದ ಕಪಿಲವಾಸುದೇವನಿಗೆ "ಗುಣೇಶ"—ಎಂಬ ವಿಶೇಷಣವನ್ನು ನೀಡುವುದರ ಮೂಲಕ ಅವನು ಬಂಧಕಗಳಾದ ಸತ್ತ್ವಾದಿ ಪ್ರಾಕೃತ ಗುಣಗಳಿಗೆ ಒಡೆಯನಾಗಿದ್ದು, ಅಂತಹ ಗುಣಗಳು ಕರ್ಮ ಬಂಧನಕ್ಕೆ ನಿಮಿತ್ತಗಳಾಗದಂತೆ ಮಾಡಲು ಸಮರ್ಥನೆಂದು ಸೂಚಿಸಲಾಗಿದೆ.

## ಇಂದ್ರಿಯ ನಿಗ್ರಹ:

ಋಷಭನಿಗೆ 'ನಿರ್ಜಿತಾತ್ಮಾ'—ಮನಸ್ಸಿನ, ಇಂದ್ರಿಯಂಗಳ ನಿಗ್ರಹವುಳ್ಳವನು; ಎಂಬ ವಿಶೇಷಣವನ್ನು ನೀಡುವುದರ ಮೂಲಕ ತನ್ನ ಇಂದ್ರಿಯ ನಿಗ್ರಹದಿಂದಾಗಿ ದ್ವಂದ್ವಗಳಿಂದ ಅತೀತನಾದ ಅವನು ನಮಗೂ ಇಂದ್ರಿಯ ನಿಗ್ರಹಕ್ಕೆ ಬೇಕಾದ ಸ್ಥೈರ್ಯವನ್ನು ನೀಡಿ, ದಂದ್ವಗಳ ಭಯದಿಂದ ರಕ್ಷಣೆ ನೀಡಲೆಂದು ಸೂಚ್ಯವಾಗಿ ಪ್ರಾರ್ಥಿಸಲಾಗಿದೆ.

## ಧರ್ಮ ರಕ್ಷಣೆಗಾಗಿ ಅವತಾರ:

ಕಲಿಕಾಲದ ಮಾಲಿನ್ಯದಿಂದ ರಕ್ಷಣೆ ನೀಡಲು ಪ್ರಾರ್ಥಿತನಾದ ಕಲ್ಕಿಗೆ ಧರ್ಮದ ರಕ್ಷಣೆಗಾಗಿ ಅವತರಿಸಿದವನೆಂದು ವಿಶೇಷಣವನ್ನು ನೀಡುವುದರ ಮೂಲಕ ಕಲಿಕಾಲದ ಮಾಲಿನ್ಯದಿಂದ ರಕ್ಷಣೆಯ ಮುಖ್ಯ ಉದ್ದೇಶವೂ ಧರ್ಮಾನುಷ್ಠಾನವೇ—ಎಂದು ಸೂಚಿಸಲಾಗಿದೆ.

## ತ್ರಿಧಾಮಾ:

ಮಾಧವನು ಅನಂತಾಸನ, ವೈಕುಂಠ, ಶ್ವೇತದ್ವೀಪಗಳೆಂಬ ಮೂರು ಮುಖ್ಯಗಳಾದ ಆವಾಸಸ್ಥಾನಗಳುಳ್ಳವನು. ಆದರೂ ಭಕ್ತವತ್ಸಲನಾಗಿ ಸಾಯಂಕಾಲದ ಅವಧಿಯಲ್ಲಿ ಭಕ್ತರ ರಕ್ಷಣೆಯಲ್ಲಿ ತೊಡಗಿರುವನು–ಎಂಬುದಾಗಿ ಅವನ ಭಕ್ತ ವಾತ್ಸಲ್ಯವನ್ನು ತೋರಿಸಿಕೊಡುವುದಕ್ಕಾಗಿಯೇ "ತ್ರಿಧಾಮಾ" – ಎಂಬ ವಿಶೇಷಣವನ್ನು ನೀಡಲಾಗಿದೆ.

## ಇವನೇ ಮಾಡುವವನು:

ಅರ್ಧರಾತ್ರಿಯಲ್ಲಿ ರಕ್ಷಿಸಲು ಬೇಡಿಕೊಳ್ಳಲ್ಪಡುವ ಪದ್ಮನಾಭನಿಗೆ 'ಏಕಃ'–ಇವನೇ ಎಲ್ಲವನ್ನೂ ಮಾಡುವವನು[1] –ಎಂಬ ವಿಶೇಷಣವನ್ನು ನೀಡುವ ಮೂಲಕ ಆ ಸಂದರ್ಭದಲ್ಲಿ ಇತರರು ಯಾರಾದರೂ ರಕ್ಷಣೆ ನೀಡಿದರೂ ಅವರನ್ನು ಪ್ರೇರಿಸಿ ಅವರ ಮೂಲಕ ರಕ್ಷಣೆ ಕೊಡಿಸುವವನೂ ಪದ್ಮನಾಭನೇ–ಎಂದು ಸೂಚಿಸಲಾಗಿದೆ. ಲೌಕಿಕ ದೃಷ್ಟಿಯಿಂದ ಅರ್ಧರಾತ್ರಿಯಲ್ಲಿ ರಕ್ಷಿಸುವುದು ಕಷ್ಟಸಾಧ್ಯ. ಆದರೂ ಪದ್ಮನಾಭ ಆ ಕಾಲದಲ್ಲೂ ರಕ್ಷಣೆ ನೀಡುವನು–ಎಂಬುದನ್ನು ಅಪಿ ಶಬ್ದಾರ್ಥದ ಉತಶಬ್ದವು ನೀಡಬಲ್ಲದು.

---

1 ಏಕಃ ಸರ್ವಾಧಿಕೋ ಜ್ಞೇಯಃ ಏಷ ಏವ ಕರೋತಿ ಯತ್ —ಗೀ.ತಾ. 11–42

ಈ ವಿಶೇಷಣ ಪದ್ಮನಾಭನಿಗಷ್ಟೇ ಅಲ್ಲದೆ, ರಕ್ಷಣೆಯನ್ನು ನೀಡಲು ಪ್ರಾರ್ಥಿಸಿಕೊಳ್ಳಲಾಗುವ ಪ್ರತಿಯೊಂದು ಭಗವದ್ರೂಪಕ್ಕೂ ಅನ್ವಯಿಸುವಂತಹದ್ದು. ಯಾವುದೇ ಆಪತ್ತಿನಿಂದ ಬೇರೆ ಯಾರಿಂದಲಾದರೂ ರಕ್ಷಣೆ ದೊರಕಿದರೂ, ಅವರಲ್ಲೂ ಆಯಾ ಭಗವದ್ರೂಪ ಇದ್ದೇ ಅವರ ಮೂಲಕ ರಕ್ಷಣೆಯನ್ನು ಕೊಡಿಸುವುದು. ಯಾಕೆಂದರೆ ರಕ್ಷಣೆಯನ್ನು ಅವನಷ್ಟೇ ಮಾಡುವವನು–ಎಂದು.

ಹೀಗೆ ಭಗವದ್ರೂಪಗಳಿಗೆ ನೀಡಲಾಗುವ ವಿಶೇಷಣಗಳು ರಕ್ಷಣೆಗೆ ಬೇಕಾಗುವ ಸಾಮರ್ಥ್ಯವನ್ನೋ, ಭಕ್ತವಾತ್ಸಲ್ಯವನ್ನೋ ರಕ್ಷಣೆ ಮಾಡುವ ಸ್ವಭಾವವನ್ನೋ ಸೂಚಿಸಿಕೊಡಬಲ್ಲವು.



# ನಾರಾಯಣವರ್ಮದ ಬಗ್ಗೆ ಶ್ರೀ ಮಧ್ವಾಚಾರ್ಯರ ಕೊಡುಗೆ

ಭಾಗವತಕ್ಕೆ 'ಭಾಗವತತಾತ್ಪರ್ಯನಿರ್ಣಯ'ವನ್ನು ನಿರ್ಮಿಸಿ ಭಾಗವತದ ಅಜ್ಞಾತ, ಸಂದಿಗ್ಧ ಅಥವಾ ವಿಪರ್ಯಸ್ತ ಅಂಶಗಳ ಮೇಲೆ ಯಥಾರ್ಥಜ್ಞಾನದ ಬೆಳಕನ್ನು ಹರಿಸಿರುವ ಶ್ರೀ ಮಧ್ವಾಚಾರ್ಯರಿಂದ ಭಾಗವತದ ಆರನೇ ಸ್ಕಂಧದಲ್ಲಿ ಪ್ರಸ್ತುತವಾಗಿರುವ ನಾರಾಯಣವರ್ಮದ ಬಗ್ಗೆಯೂ ಸಾಕಷ್ಟು ಬೆಳಕು ಚೆಲ್ಲಲ್ಪಟ್ಟಿದೆ. ನಾರಾಯಣವರ್ಮದ ನಾಲ್ಕೈದೇ ಶ್ಲೋಕಗಳ ತಾತ್ಪರ್ಯ ಸ್ಪಷ್ಟಪಡಿಸಲ್ಪಟ್ಟಿದೆಯಾದರೂ ನಾರಾಯಣವರ್ಮದಲ್ಲಿ ಉಲ್ಲೇಖಗೊಂಡಿರುವ ಪ್ರಮುಖ ಭಗವದ್ರೂಪಗಳನ್ನು ಗುರುತಿಸಿಕೊಳ್ಳುವಿಕೆಯಲ್ಲಿ, ಅವರಲ್ಲಿ ಸಲ್ಲಿಸಬೇಕಾದ ಪ್ರಾರ್ಥನೆಯ ಸ್ವರೂಪವನ್ನು ಸರಿಯಾಗಿ ತಿಳಿದುಕೊಳ್ಳುವಿಕೆಯಲ್ಲಿ, ಆಪಾತತಃ ಅಪಾರ್ಥದಲ್ಲಿ ತೆರೆದುಕೊಳ್ಳಬಲ್ಲ ಮಾತುಗಳ ಅಂತರ್ಯವನ್ನು ಸ್ಪಷ್ಟಪಡಿಸಿಕೊಳ್ಳುವಲ್ಲಿ, ನಾರಾಯಣವರ್ಮದ ಫಲಶ್ರುತಿಯ ಬಗ್ಗೆ ಅವಿಶ್ವಾಸವನ್ನು ಪರಿಹರಿಸುವಲ್ಲಿ ತುಂಬ ಉಪಯುಕ್ತವೆನಿಸಿದೆ.[1]

**ರೂಪಗಳ ಮತ್ತು ಪ್ರಾರ್ಥನೆಯ ಪರಿಚಯ :**

ಸನತ್ಕುಮಾರ ಚತುರ್ಮುಖನ ಮಾನಸ ಪುತ್ರರಲ್ಲಿ ಒಬ್ಬನಾಗಿ ಪ್ರಸಿದ್ಧ. ಆದರೆ ಕಾಮನ ಅವತಾರನಾದ ಅವನ ಉಲ್ಲೇಖ ನಾರಾಯಣವರ್ಮದಲ್ಲಿ ಶೋಭಿಸದು. ಆದಕ್ಕಾಗಿ ಶ್ರೀಮದಾಚಾರ್ಯರು ಪ್ರಮಾಣದ ಮೂಲಕ ಭಗವಂತನದ್ದೇ ಆದ ಸನತ್ಕುಮಾರ ರೂಪವನ್ನು ಪರಿಚಯಿಸಿಕೊಟ್ಟು, ಅಂತಹವನಲ್ಲಿ ಕೇಳಿಕೊಳ್ಳಬೇಕಾದ ಪ್ರಾರ್ಥನೆ ಎಂದರೆ ಅಯೋಗ್ಯಕಾಮನೆಗೆ ಬಲಿಯಾಗದಂತೆ ಸಂರಕ್ಷಿಸಬೇಕೆಂದು, 'ಕಾಮದೇವ' ಶಬ್ದದಿಂದ ಅಯೋಗ್ಯಕಾಮನೆ ಎಂಬ ಅರ್ಥವನ್ನೇ ಹೊರಡಿಸಬೇಕು—ಎಂದು ವಿವರಿಸಿರುವರು.

'ಪುರುಷಾಂತರಾರ್ಚನೆ'ಯ ದೆಸೆಯಿಂದ ಕಾಪಾಡಲು ಕೇಳಿಕೊಳ್ಳಲಾಗುವ 'ದೇವರ್ಷಿವರ್ಯ' ಎಂದರೆ ಇತರ ವ್ಯಾಖ್ಯಾನಕಾರರು ಅಭಿಪ್ರಾಯಪಡುವಂತೆ ನಾರದರು ಆಗಲಾರರು. ನಾರಾಯಣವರ್ಮದಲ್ಲಿ ಅವರ ಉಲ್ಲೇಖ ಉಚಿತವೆನಿಸದು. ಆದ್ದರಿಂದ 'ದೇವರ್ಷಿವರ್ಯ' ಎಂದರೆ ಇತರಾದೇವಿಯ ಸುತನಾಗಿ

---

1 ಆಚಾರ್ಯರು ಭಾಗವತ ತಾತ್ಪರ್ಯ ನಿರ್ಣಯದಲ್ಲಿ ಉದಾಹರಿಸಿರುವ ಆಯ್ಯಾ ಪ್ರಮಾಣಗಳನ್ನು ಆಯಾ ಮಾತುಗಳನ್ನು ವ್ಯಾಖ್ಯಾನಿಸುವಾಗ ಹಾಗೂ ಉಪೋದ್ಘಾತದಲ್ಲಿ ಉಲ್ಲೇಖಿಸಿರುವುದನ್ನು ಗುರುತಿಸಿಕೊಳ್ಳಬಹುದಾಗಿದೆ.

ಅವತರಿಸಿರುವ ಮಹಿದಾಸರೂಪಿ ಭಗವಂತನು—ಎಂದು ಪ್ರಮಾಣದ ಮೂಲಕ ವ್ಯಾಖ್ಯಾನಿಸಿದ ಶ್ರೀಮದಾಚಾರ್ಯರು, ಅವನಲ್ಲಿ ಯಾವುದರ ದೆಸೆಯಿಂದ ಕಾಪಾಡಲು ಕೇಳಿಕೊಳ್ಳಲಾಗುವುದೋ ಅಂತಹ 'ಪುರುಷಾಂತರಾರ್ಚನ' ಎಂದರೆ ಮೇಲ್ನೋಟಕ್ಕೆ ತಿಳಿಯುಂವಂತೆ ಇತರರ ಅರ್ಚನೆ ಅಲ್ಲ. ಯಾಕೆಂದರೆ ಇತರರ ಅರ್ಚನೆಯೇ ನಾರಾಯಣವರ್ಮಕ್ಕಾಗಲೀ, ಭಾಗವತಕ್ಕಾಗಲೀ ಅಸಮ್ಮತವಾದುದಲ್ಲ. ಮತ್ತೆ ದೇವರ ಪರಿವಾರದವರೆಂಬ ದೃಷ್ಟಿಯನ್ನಿಟ್ಟುಕೊಳ್ಳದೆ ಸ್ವಾತಂತ್ರ್ಯ ವ್ಯಕ್ತಿತ್ವವನ್ನು ಆರೋಪಿಸಿ ಅರ್ಚಿಸುವುದಷ್ಟೇ ಅಸಮ್ಮತವಾಗಿದ್ದು, ಅಂತಹ ಅರ್ಚನೆಯ ದೆಸೆಯಿಂದಷ್ಟೇ ಇಲ್ಲಿ ಕಾಪಾಡಲು ಬೇಡಿಕೊಂಡಿರುವಂತಹದ್ದೆಂದು ಸ್ಪಷ್ಟಪಡಿಸಿರುವರು. ಅಲ್ಲದೆ, ಭಗವಂತನನ್ನು ಮರೆತು ಇತರರನ್ನು ಪೂಜಿಸುವುದು ಹೇಗೆ ಅಪರಾಧವೋ ಅಂತೆಯೇ ಭಗವಂತನ ಪ್ರೇರಣೆಗೊಳಗಾಗಿ ನಡೆದ ಕರ್ಮಗಳನ್ನು ಅವನಿಗೆ ಸಮರ್ಪಿಸದಿರುವುದೂ, ಕ್ಷಣ ಕ್ಷಣಕ್ಕೆ, ಹೆಜ್ಜೆ ಹೆಜ್ಜೆಗೆ ಉಪಕರಿಸುತ್ತಿರುವ ಅವನನ್ನು ಸ್ಮರಿಸಿಕೊಳ್ಳದಿರುವುದೂ ಅಪರಾಧಗಳು. ಇಂತಹ ಅಪರಾಧಗಳ ದೆಸೆಯಿಂದ ರಕ್ಷಣೆ ನೀಡಲು ನಾರಾಯಣವರ್ಮದಲ್ಲಿ ಪ್ರತ್ಯೇಕವಾಗಿ ಪ್ರಾರ್ಥಿಸಿಕೊಂಡದ್ದಿಲ್ಲ. ಅದಕ್ಕಾಗಿ ಶ್ರೀಮದಾಚಾರ್ಯರು 'ಪುರುಷಾಂತರಾರ್ಚನ' ಎಂಬ ಶಬ್ದವನ್ನು 'ಉಪಲಕ್ಷಣ' ಎಂದಿಟ್ಟುಕೊಂಡು ಅವನಿಗೆ ಕರ್ಮಗಳನ್ನು ಸಮರ್ಪಿಸದಿರುವ, ಅವನನ್ನು ಸ್ಮರಿಸಿಕೊಳ್ಳದಿರುವ ಅಪರಾಧಗಳನ್ನೂ ಆ ಶಬ್ದದಿಂದಲೇ ಪರಾಮರ್ಶಿಸಿ, ಅವುಗಳ ದೆಸೆಯಿಂದ ರಕ್ಷಣೆ ನೀಡುವಂತೆ ಮಹಿದಾಸರೂಪಿ ಪರಮಾತ್ಮನಲ್ಲಿ ಪ್ರಾರ್ಥಿಸಿಕೊಳ್ಳಬೇಕೆಂದು ಪ್ರಮಾಣದ ಮೂಲಕ ಸ್ಪಷ್ಟಪಡಿಸಿರುವರು.

ಹೀಗೆ ನಾರಾಯಣವರ್ಮದಲ್ಲಿ ಉಲ್ಲೇಖಗೊಂಡಿರುವ ಎರಡು ಭಗವದ್ರೂಪಗಳ ಬಗ್ಗೆ ಹಾಗೂ ಅವುಗಳಲ್ಲಿ ಸಲ್ಲಿಸಬೇಕಾದ ಪ್ರಾರ್ಥನೆಯ ಸ್ವರೂಪದ ಬಗ್ಗೆ ಸ್ಪಷ್ಟತೆ ದೊರೆತಂತಾಗಿದೆ.

**ಅಸಾರ್ಥ ಸಲ್ಲದು :**

ಎಲ್ಲ ದೇಶಗಳಲ್ಲಿ, ಎಲ್ಲ ಕಾಲಗಳಲ್ಲಿ, ಎಲ್ಲ ಅವಸ್ಥೆಗಳಲ್ಲಿ ಸಂರಕ್ಷಣೆ ನೀಡುವಂತೆ ಕೇಳಿಕೊಳ್ಳಲಾಗುವ ಭಗವಂತನಲ್ಲಿ ಎಲ್ಲ ಬಗೆಯ ಸಂರಕ್ಷಣೆ ನೀಡಲುಬೇಕಾದ ಸಾಮರ್ಥ್ಯ ಇದ್ದೇ ಇದೆ—ಎಂದು ಅನುಸಂಧಾನ ಮಾಡಿಕೊಳ್ಳಲು, ಮನವರಿಕೆ ಮಾಡಿಕೊಳ್ಳಲು ಹೊರಟಿರುವ 'ಯಥಾ ಹಿ ಭಗವಾನೇವ....' —ಎಂಬ ಶ್ಲೋಕದಲ್ಲಿ ಆಪಾತತಃ ಭಗವಂತನಿಗೆ ಸದಸದ್ವಸ್ತುಗಳ ತಾದಾತ್ಮ್ಯವನ್ನು ಸಾರುತ್ತಿರುವಂತೆ ಕಾಣಿಸುವುದು. ಆದರೆ ಒಂದು ವೇಳೆ ಅವನು ಸದಸದ್ವಸ್ತುಗಳ ತಾದಾತ್ಮ್ಯವನ್ನು ಹೊಂದಿರುವವನಾದರೆ, ಅಶಕ್ತಗಳಾದ, ಅಸಾರಗಳಾದ ವಸ್ತುಗಳ ಸ್ವರೂಪದ

ಅವನಲ್ಲಿ ನಿರೂಪಿಸಲಾದ ಒಂದು ಮಹಿಮೆಯೂ ಕೂಡದು. ಇದನ್ನು ಮಣಗಂಡ ಶ್ರೀಮದಾಚಾರ್ಯರು ಸದಸದ್ವಸ್ತುಗಳ ನಿಯಾಮಕನಾಗಿರುವುದರಿಂದ ಅವನನ್ನು 'ಸದಸದ್ರೂಪಿ' ಎಂದು ಕರೆದಿರುವುದೇ ಹೊರತು ಸದಸದಾತ್ಮಕನಾಗಿರುವುದರಿಂದಲ್ಲ ಎಂದು ಪ್ರಮಾಣಪೂರ್ವಕವಾಗಿ ಸ್ಪಷ್ಟಪಡಿಸಿರುವರು. ಆ ಮೂಲಕ ನಾರಾಯಣ ವರ್ಮದ ಪೂರ್ವಾಪರ ಅಸಂಗತವೆನಿಸದಂತೆ ಮಾಡಿದಂತಾಗಿದೆ.

ಹಾಗೆಯೇ 'ನಾರಾಯಣವರ್ಮ'ದಲ್ಲಿ ಶ್ರೀಮನ್ನಾರಾಯಣನ ಆಯುಧ ಗಳಾದ ಚಕ್ರ, ಗದಾ, ಶಂಖ, ಖಡ್ಗ, ಗುರಾಣಿ ಹಾಗೂ ವಾಹನವಾದ ಗರುಡ ಸೇವಕನಾದ ವಿಷ್ವಕ್ಸೇನ ಇವರನ್ನು ವ್ಯಷ್ಟಿಯಾಗಿ ಉಲ್ಲೇಖಿಸಿ ಸಂರಕ್ಷಣೆಯನ್ನು ಪ್ರಾರ್ಥಿಸಲಾಗಿದೆ. ಹಾಗೆಯೇ 'ನಾಮರೂಪಯಾನಾಯುಧಾನಿ' 'ಪಾರ್ಷದ ಭೂಷಣಾಃ' ಎಂದು ಭಗವಂತನ ನಾಮ, ರೂಪ, ವಾಹನ, ಆಯುಧ, ಪರಿ ವಾರದವರು, ಆಭರಣಗಳು—ಇವುಗಳನ್ನು ಸಮಷ್ಟಿಯಾಗಿ ಉಲ್ಲೇಖಿಸಿಯೂ ಅವರಲ್ಲಿ ಸಂರಕ್ಷಣೆಯನ್ನು ಪ್ರಾರ್ಥಿಸಲಾಗಿದೆ. ಈ ಪ್ರಾರ್ಥನೆಗಳನ್ನು ಕೇಳಿದಾಕ್ಷಣ ಭಗವಂತನ ಆಯುಧಾದಿಗಳೂ ಸ್ವತಂತ್ರವಾಗಿ ರಕ್ಷಣೆ ನೀಡಲು ಸಮರ್ಥವಾದವು ಗಳೇನೋ ಎಂದು ಮೂಡಬಹುದಾದ ಭ್ರಮೆಯನ್ನು ಪರಿಹರಿಸುವುದಕ್ಕಾಗಿ ಭಗವಂತನ ಆಭರಣ, ಆಯುಧ, ಚಿಹ್ನೆಗಳಲ್ಲಿ ಭಗವಂತನು ಶಕ್ತಿರೂಪದಿಂದ ಸನ್ನಿಹಿತನಾಗಿರುವನೆಂದು ಭಾಗವತ ತಿಳಿಸಿದೆ—'ಭೂಷಣಾಯುಧಲಿಂಗಾಖ್ಯಾಃ ಧತ್ತೇ ಶಕ್ತೀಃ ಸ್ವಮಾಯಯಾ' ಈ ಮಾತಿಗೆ ಮೇಲ್ನೋಟಕ್ಕೆ ಕಾಣಿಸುವ ಅರ್ಥ— ಭಗವಂತನು ತನ್ನ ಇಚ್ಛೆಗನುಗುಣವಾಗಿ ಆಭರಣ, ಆಯುಧ, ವಾಹನ—ಎನಿಸುವ ಶಕ್ತಿಗಳನ್ನು ಧರಿಸಿರುವನು. ಇದರಿಂದಾಗಿ ಅವನಲ್ಲಿ ಶಕ್ತಿಗಳಿವೆಯೇ ಹೊರತು ಆಭರಣಾದಿಗಳಿಲ್ಲ-ಎಂಬ ಕಲ್ಪನೆ ಉಂಟಾಗಬಹುದು. ಇದನ್ನು ತಡೆಯುವುದ ಕ್ಕಾಗಿಯೇ ಆಚಾರ್ಯರು ಒಂದು ಪ್ರಮಾಣವನ್ನು ಉಲ್ಲೇಖಿಸಿ, ಅದರಲ್ಲಿ ಶ್ರೀ ವಿಷ್ಣುವು ಅವನ ಆಭರಣಾದಿಗಳಲ್ಲಿ ಆಯಾ ಶಕ್ತಿರೂಪದಿಂದ ಸನ್ನಿಹಿತನಾಗಿರುವ ನೆಂದು ಸ್ಪಷ್ಟಪಡಿಸಿರುವರು. ಇದರಿಂದಾಗಿ 'ನಾರಾಯಣವರ್ಮ'ದಲ್ಲಿ ಅವನ ಆಭರಣಾದಿಗಳಿಂದ ರಕ್ಷಣೆಯನ್ನು ಪ್ರಾರ್ಥಿಸಿಕೊಂಡಿರುವುದರ ಔಚಿತ್ಯವನ್ನು ಇನ್ನಷ್ಟು ಸ್ಪಷ್ಟಪಡಿಸಿದಂತಾಯಿತು.

**ಅವಿಶ್ವಾಸದ ಪರಿಹಾರ:**

'ನಾರಾಯಣವರ್ಮ'ದ ಅನುಸಂಧಾನದ ಫಲವನ್ನು ವಿವರಿಸ ಹೊರಟ 'ಫಲಶ್ರುತಿ'ಯಲ್ಲಿ ನಾರಾಯಣವರ್ಮವನ್ನು ಅನುಸಂಧಾನ ಮಾಡಿದವನಿಗೆ ಯಾವುದೇ ಬಗೆಯ ಭಯಕ್ಕೆ ಅವಕಾಶವಿಲ್ಲ, ಮಾತ್ರವಲ್ಲದೆ ಅಂತಹವನ ಸ್ಪರ್ಶ ಕ್ಕೊಳಗಾದವನಿಗೂ, ದರ್ಶನಕ್ಕೊಳಗಾದವನಿಗೂ ಭಯಕ್ಕೆ ಎಡೆ ಇಲ್ಲ-ಎಂದು

ನಿರೂಪಿತವಾಗಿದ್ದು, ಇದೂ 'ಅರ್ಥವಾದ' ಶೈಲಿಯಲ್ಲಿ ಹೊರಟಿರುವ ಸ್ತೋತ್ರಗಳ 'ಫಲಶ್ರುತಿ'ಗಳಂತೆ ನಿಜವಾದ ಫಲವನ್ನು ಹೇಳುತ್ತಿಲ್ಲ. 'ನಾರಾಯಣವರ್ಮ'ದ ಪ್ರಾಶಸ್ತ್ಯವನ್ನು ತಿಳಿಸುವುದರಲ್ಲಷ್ಟೇ ತಾತ್ಪರ್ಯವುಳ್ಳದ್ದು–ಎಂಬ ಭ್ರಾಂತಿಯಾಗಲೀ ಸಂದೇಹವಾಗಲೀ ಉಂಟಾಗುವ ಸಾಧ್ಯತೆ ಇದೆ. ನಾರಾಯಣವರ್ಮವನ್ನು ಪಠಿಸಿದವರಿಗೆ ಅದರ ಫಲ ದೊರಕದಿರುವ ಅನುಭವ ಅದಕ್ಕೆ ಪೋಷಕವಾಗಬಲ್ಲದು. ಆದರೆ ಶ್ರೀಮದಾಚಾರ್ಯರು ವಿದ್ಯೆ ಸರಿಯಾಗಿ ಫಲಿಸಬೇಕಾದರೆ ಗುರುಗಳ ಯೋಗ್ಯತೆ, ಶಿಷ್ಯನ ಯೋಗ್ಯತೆ, ಗುರುಸೇವೆ, ಗುರುಗಳ ಪ್ರಸನ್ನತೆ–ಮುಂತಾದವುಗಳ ಆವಶ್ಯಕತೆಯನ್ನು ಪ್ರತಿಪಾದಿಸುವ ಪ್ರಮಾಣಗಳ ಮೂಲಕ ಪಠಿಸಿದವರಿಗೆ ಫಲ ದೊರಕಿಲ್ಲ ಎಂದಾಕ್ಷಣ ಸ್ತೋತ್ರ ಅಂತಹ ಫಲ ನೀಡುವುದಕ್ಕೆ ಅಸಮರ್ಥ ಎಂದು ತೀರ್ಮಾನಿಸುವಂತಿಲ್ಲ ಎಂಬುದಾಗಿ ಸಮರ್ಥಿಸುವ ಮೂಲಕ 'ನಾರಾಯಣ ವರ್ಮ' ಅದರ 'ಫಲಶ್ರುತಿ'ಯಲ್ಲಿ ಹೇಳಲಾದ ಫಲಗಳನ್ನು ನೀಡುವುದಕ್ಕೆ ಸಮರ್ಥವಾದುದೇ ಎಂದು ಅಭಿಪ್ರಾಯಪಟ್ಟಿರುವರು. ಇದರಿಂದಾಗಿ ನಾರಾಯಣವರ್ಮದ ಫಲಗಳ ವಿಷಯದಲ್ಲಿ ಅವಿಶ್ವಾಸ ಪರಿಹರಿಸಲ್ಪಟ್ಟಂತಾಗಿದೆ.

## ಮಹತ್ತ್ವದ ಆವಿಷ್ಕಾರ :

ನಾರಾಯಣವರ್ಮ ಬೃಹದಾರಣ್ಯಕೋಪನಿಷತ್ತಿನಲ್ಲಿ [4-5-17] ಮಧುವಿದ್ಯೆಯಾಗಿ ಪ್ರಸ್ತಾಪಿಸಲ್ಪಟ್ಟಿರುವುದನ್ನು ತಮ್ಮ ಉಪನಿಷದ್ಭಾಷ್ಯದಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಿ, ದಧೀಚಿ ಋಷಿಯಲ್ಲಿದ್ದ ನಾರಾಯಣವರ್ಮ ವಿದ್ಯೆಯನ್ನು ಅಶ್ವಿನೀದೇವತೆಗಳು ಉಪದೇಶ ಪಡೆಕೊಂಡ ಹಿನ್ನೆಲೆಯನ್ನೂ ಅದರ ಘಟನೆ, ಪರಿಣಾಮಗಳನ್ನೂ ವಿವರಿಸಿ—ನಾರಾಯಣವರ್ಮದ ವಿಷಯದಲ್ಲಿ ಗೌರವಬುದ್ಧಿ ಅಧಿಕವಾಗುವಂತೆ ಮಾಡಿದ ಕೀರ್ತಿ ಶ್ರೀ ಮಧ್ವಾಚಾರ್ಯರಿಗೆ ಸಲ್ಲಬೇಕಾದದ್ದು.

ಹೀಗೆ ನಾರಾಯಣವರ್ಮದ ಕೆಲವು ಮಾತುಗಳ ಆಂತರ್ಯವನ್ನು ಪ್ರಕಟಿಸಿರುವುದರಲ್ಲಿ, ಕೆಲವು ಮಾತುಗಳ ಅಪಾರ್ಥವನ್ನು ಪರಿಹರಿಸುವುದರಲ್ಲಿ, ನಾರಾಯಣ ವರ್ಮದ 'ಫಲಶ್ರುತಿ'ಯ ವಿಷಯದಲ್ಲಿ ಅವಿಶ್ವಾಸವನ್ನು ದೂರೀಕರಿಸುವುದರಲ್ಲಿ ಹಾಗೂ ಅಪೌರುಷೇಯವಾದ ಉಪನಿಷತ್ತಿನಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ನಾರಾಯಣ ವರ್ಮದ ಹಿರಿಮೆಗರಿಮೆಗಳನ್ನು ಗುರುತಿಸಿಕೊಳ್ಳುವುದರಲ್ಲಿ ಶ್ರೀಮದಾಚಾರ್ಯರಿಂದ ಸಂದ ಕೊಡುಗೆ ಅನನ್ಯ.



## ಶ್ರೀ ವಾದಿರಾಜತೀರ್ಥ ವಿರಚಿತ

# ನಾರಾಯಣವರ್ಮ

[ಭಾಗವತದ 'ನಾರಾಯಣವರ್ಮ'ದ ಅನೇಕ ಆಶಯಗಳಿಗೆ ಕನ್ನಡದ ರೂಪಾಂತರ ಕೊಟ್ಟು ರೂಪಿತವಾದ ಕೃತಿ]

ಸಕಲ ಋಷಿಗಳಲ್ಲಿ ಹರಿ ನಮ್ಮ ಸ್ವಾಮಿಯಾಗಿ ರಕ್ಷಿಸು । ಜಲದಲಿ ಮತ್ಸ್ಯಾವತಾರನಾಗಿ । ಸ್ಥಳದಲ್ಲಿ ವಾಮನನಾಗಿ ರಕ್ಷಿಸು ನಿಮ್ಮ ನೆನೆವರಾ । ಆಕಾಶದಲ್ಲಿ ತ್ರಿವಿಕ್ರಮನಾಗಿ ರಕ್ಷಿಸು । ಭಯಗಳಲ್ಲಿ ನಾರಸಿಂಹನಾಗಿ ಮಾರ್ಗದಲ್ಲಿ ವರಾಹನಾಗಿ ರಕ್ಷಿಸು ನಿಮ್ಮ ನೆನೆವರಾ । ಪರ್ವತಾಗ್ರದಲ್ಲಿ ಪರಶುರಾಮನಾಗಿ ರಕ್ಷಿಸು । ಪರದೇಶದಲ್ಲಿ ರಾಮಚಂದ್ರನಾಗಿ ರಕ್ಷಿಸು ನಿಮ್ಮ ನೆನೆವರಾ । ಆಶ್ರಯದಲ್ಲಿ (ಅಜ್ಞಾನದಲ್ಲಿ?) ನರನಾರಾಯಣನಾಗಿ ರಕ್ಷಿಸು । ಅಯೋಗ್ಯರಲ್ಲಿ ದತ್ತಾತ್ರೇಯನಾಗಿ ರಕ್ಷಿಸು । ಕರ್ಮಬಂಧಗಳೆಲ್ಲ ಕಳೆದು ರಕ್ಷಿಸು ಕಪಿಲಮೂರ್ತಿಯಾಗಿ । ಪ್ರಾತಃಕಾಲದಲಿ ಕೇಶವ ನಮ್ಮ ರಕ್ಷಿಸು । ಸಾಯಂಕಾಲದಲಿ ಗೋವಿಂದ ನಮ್ಮ ರಕ್ಷಿಸು । ಅಪರಾಹ್ನ ಕಾಲಗಳೆಲ್ಲ ಕಳೆದು ರಕ್ಷಿಸು । ನಮ್ಮ ಸಕಲ ಕಾಲಗಳಲ್ಲಿ ನರಕದಿಂದ ಕೂರ್ಮನಾಗಿ ರಕ್ಷಿಸು । ವಿಪತ್ತಿನಿಂದ ಧನ್ವಂತರಿ ರಕ್ಷಿಸು । ಅನ್ಯದೇವತೆ ಭಜನೆ ಕಳೆದು ರಕ್ಷಿಸಯ್ಯ ಶ್ರೀಕೃಷ್ಣ ಮೂರುತಿಯಾಗಿ ಅಜ್ಞಾನ ವಿಷಯಗಳ ಕಳೆದು ರಕ್ಷಿಸು ವೇದವ್ಯಾಸ ಮೂರ್ತಿಯಾಗಿ । ಕೃಷ್ಣನ ಶಂಖವೆ ನಿಮ್ಮ ಧನಿದುರಿ ರಾಕ್ಷಸರ ಎದೆ ಒಡೆಸಿ, ಭಯಬಿಡಿಸಿ ಲಯವನೆ ಮಾಡಿಸಿ ಪೂತಗಂಧರ್ವರು ಕೂಶ್ಮಾಂಡ ತೋರಿಸಲು ವಿಷ್ಣುಗದೆ ರಾಕ್ಷಸರು ಒಡೆದು ಚೂರ್ಣವ ಮಾಡಿ । ಕಿಡಿಗಳಂತೆ ಭೂಮಿ ಮೇಲೆ ಆಧರಿಸಿ ॥ ಶತ-ಚಂದ್ರಪ್ರಭೆಯಂತೆ ಹೊಳೆವ ಹರಿಯು । ನಮ್ಮ ಮತಿವಂತರು ವೈರಿಗಳ ಕಣ್ಣಿಗೆ ಕಾಣಬಾರದು ಮಾಡಿ । ತೋರಿಸಿ ತಮ್ಮ ದಿವ್ಯತೇಜಗಳ । ಧರ್ಮ ವಿಷಯದಲಿ ಹಯಗ್ರೀವನಾಗಿ ರಕ್ಷಿಸು । ಮಧ್ಯಾಹ್ನ ಕಾಲದಲಿ ಮಧುಸೂದನನಾಗಿ । ಸಾಯಂಕಾಲ-ದಲಿ ಶ್ರೀವತ್ಸಮೂರ್ತಿಯಾಗಿ । ಉಷಃಕಾಲದಲಿ ಜನಾರ್ದನನಾಗಿ ರಕ್ಷಿಸು । ತ್ರಿಸಂಧ್ಯಾ-ಕಾಲದಲಿ ದಾಮೋದರನಾಗಿ ವಿಶ್ವಮೂರ್ತಿಯಾಗಿ ರಕ್ಷಿಸು । ಅರ್ಧರಾತ್ರಿಯಲಿ ಹೃಷೀಕೇಶನಾಗಿ । ಅಪರಾತ್ರಿಯಲಿ ರಕ್ಷಿಸಯ್ಯ ಶ್ರೀವತ್ಸಮೂರ್ತಿಯಾಗಿ । ಸಾಮವೇದಕೆ ಅಭಿಮಾನಿಯಾದ ಗರುಡವಾಹನನೆ ಸಲಹೆನ್ನ ವಿಷದ ಭಯಗಳ ಬಿಡಿಸಿ । ಕೃಷ್ಣ-ಮುಕುಟಾಧರನೆ ರಕ್ಷಿಸೊ ನಮ್ಮನ್ನ ಪ್ರಾಣೇಂದ್ರಿಯದಿಂದ । ಬುದ್ಧಿಯಿಂದ ದಿಕ್ಕು-ದಿಕ್ಕುಗಳಲಿ ನಾರಸಿಂಹಮೂರ್ತಿಯಾಗಿ । ನಾರಸಿಂಹ ನಾದಗಳಿಂದ ಎಲ್ಲ ಪರಿಯಿಂದ ಭಕ್ತರನ್ನೆಲ್ಲ ನರಹರಿ ಇದ್ದು ರಕ್ಷಿಸೊ । ಗುರುಮಧ್ವರಾಯರ ಗುರು ವಿಶ್ವವ್ಯಾಪಕರ ಸುವಿಷ್ಣು ವೈಷ್ಣವರ ಮಗನಂತೆ ನಿಮ್ಮ ಸುನಾಮ ಎಂದು ಹಾಡಿಸುಖಿಯಾಗಿ ಜಮದಗ್ನಿ-ವರದ, ಪ್ರಲ್ಹಾದವರದ, ಅಸುರರ ಗೆಲಿದ ಬಲರಾಮ ಜಾನಕಿವಲ್ಲಭ ಜಯ ಜಯ-ರಾಮ ನಿತ್ಯ ವೈಕುಂಠ ನಿಜ ಗೋವಿಂದ, ಅಂಬರೀಷರಾಯಗೆ ವರಗಳ ಕೊಟ್ಟ ನಂಬಿದ ಭಕ್ತರಿಗೆ ಅಭಯ ಕೊಟ್ಟ ಯಶೋದೆಯ ಮಾನ ಉದ್ಧರಿಸಿದ ಹಯವದನ ರಕ್ಷಿಸು ।

## ಉಪನಿಷತ್ತುಗಳಲ್ಲಿ ಪ್ರಸ್ತಾಪಿಸಲ್ಪಟ್ಟಿರುವಂತೆ ಜೀವಾತ್ಮನ ಸ್ವರೂಪದಲ್ಲಿ ಹಾಗೂ ದೇಹದ ಅಂಗಗಳಲ್ಲಿ ಇದ್ದು ಸಂರಕ್ಷಿಸುತ್ತಿರುವ

# ಭಗವದ್ರೂಪಗಳು

ಕವಚಸ್ತೋತ್ರಗಳಲ್ಲಿ ಭಗವಂತನು ಜೀವರ ಸುತ್ತಲಿನ ದೇಶದಲ್ಲಿ ಇದ್ದು ಕೊಂಡು ಹಾಗೂ ಕಾಲದಲ್ಲಿ ಇದ್ದುಕೊಂಡು ನೀಡುತ್ತಿರುವ ಸಂರಕ್ಷಣೆಯಂತೆ ಜೀವರ ಸ್ವರೂಪದಲ್ಲಿ ಹಾಗೂ ಅವರ ದೇಹದ ಬೇರೆ ಬೇರೆ ಭಾಗಗಳಲ್ಲಿ, ಅವಯವಗಳಲ್ಲಿ ಇದ್ದುಕೊಂಡು ನೀಡುತ್ತಿರುವ ಸಂರಕ್ಷಣೆಯೂ ಪ್ರಸ್ತಾಪಿಸಲ್ಪಡುವುದು. ಭಗವಂತನು ತನ್ನ ನಿರ್ದಿಷ್ಟ ರೂಪಗಳಿಂದ ಜೀವಾತ್ಮರ ಸ್ವರೂಪದಲ್ಲಿ ಹಾಗೂ ದೇಹದ ಬೇರೆ ಬೇರೆ ಭಾಗಗಳಲ್ಲಿ, ಅವಯವಗಳಲ್ಲಿ ಇದ್ದುಕೊಂಡು ಸಂರಕ್ಷಿಸುವನಾದರೂ ಅವನ ಆ ನಿರ್ದಿಷ್ಟರೂಪಗಳಿಗೂ, ಅವನ ಬೇರೆ ರೂಪಗಳಿಗೂ ಅತ್ಯಂತಾಭೇದ ಇರುವುದರಿಂದ ಕವಚಸ್ತೋತ್ರಗಳಲ್ಲಿ ಅವನ ನಿರ್ದಿಷ್ಟ ರೂಪಗಳ ಉಲ್ಲೇಖ ಮಾಡದೆ ಸಾಮಾನ್ಯನಾಮಗಳಿಂದ ಆಯಾ ಅಂಗ ಗಳಲ್ಲಿ ಅವನ ಸಂರಕ್ಷಣೆಯ ಸ್ಮರಣೆಯನ್ನಷ್ಟೇ ಮಾಡಲಾಗುವುದು. ಆದರೆ ಜೀವಾತ್ಮರ ಸ್ವರೂಪದಲ್ಲಿ ಹಾಗೂ ದೇಹದ ಬೇರೆ ಬೇರೆ ಭಾಗಗಳಲ್ಲಿ ಇರುವ ಭಗವಂತನ ನಿರ್ದಿಷ್ಟ ರೂಪಗಳ ಅರಿವನ್ನು ಪಡೆದುಕೊಂಡು ಆಯಾ ರೂಪಗಳ ಸ್ಮರಣೆಯನ್ನು ಕವಚಸ್ತೋತ್ರಗಳಲ್ಲಿ ಉಲ್ಲೇಖಿಸಲ್ಪಡುವ ನಾಮಗಳಿಂದ ತಂದು ಕೊಳ್ಳಬೇಕು. ಆದ್ದರಿಂದ ಭಗವಂತನ ಯಾವ ಯಾವ ರೂಪ ಜೀವನ ಸ್ವರೂಪ ದಲ್ಲಿ ಹಾಗೂ ದೇಹದ ಬೇರೆ ಬೇರೆ ಭಾಗಗಳಲ್ಲಿ ಇದೆ ಎನ್ನುವ ವಿವೇಚನೆ ಅತ್ಯವಶ್ಯ. ಉಪನಿಷತ್ತುಗಳಲ್ಲಿ ಅಲ್ಲಲ್ಲಿ ವಿಕ್ಷಿಪ್ತವಾಗಿ, ಆ ಮಾಹಿತಿ ದೊರಕುವುದು. ಉಪನಿ ಷತ್ತುಗಳ ಆಶಯವನ್ನು ಸ್ಪಷ್ಟಪಡಿಸಿರುವ ಶ್ರೀ ಮಧ್ವಾಚಾರ್ಯರು ಉಲ್ಲೇಖಿ ಸಿರುವ ಪ್ರಮಾಣಗಳ ಸಂಗ್ರಹದೊಂದಿಗೆ ಜೀವನ ಸ್ವರೂಪದಲ್ಲಿ, ಜೀವನ ದೇಹದ ಹೃದಯದಲ್ಲಿ ಹಾಗೂ ದೇಹದ ಬೇರೆ ಬೇರೆ ಭಾಗಗಳಲ್ಲಿ ಹಾಗೂ ಬೇರೆ ಬೇರೆ ಅವಸ್ಥೆಗೊಳಗಾಗುವಾಗ ಇರುವ ಭಗವದ್ರೂಪಗಳನ್ನು ಕ್ರೋಢೀಕರಿಸಲು ಇಲ್ಲಿ ಯತ್ನಿಸಲಾಗಿದೆ.

**ಜೀವನ ಸ್ವರೂಪದಲ್ಲಿ :**

ಭಗವಂತನು ಜೀವನ ಹೊರಗಿನ ಶರೀರದಲ್ಲಿ ಆ ದೇಹದ ಅಂಗುಷ್ಠ ಪರಿ ಮಾಣವನ್ನು ಹೊಂದಿ ಇದ್ದರೆ, ಜೀವನ ಸ್ವರೂಪಾತ್ಮಕ ದೇಹದಲ್ಲಿ ಆ ದೇಹದ

ಅಂಗುಷ್ಠ ಪರಿಮಾಣವನ್ನು ಹೊಂದಿ ಇರುವನು.[1] ಭಗವಂತನು ಸುಖಾತ್ಮಕ; ಕ್ರೀಡಾತ್ಮಕ ಹಾಗೂ ಪ್ರೇರಕ. ಆದುದರಿಂದ ಅನ್ವರ್ಥಕವಾಗಿ 'ಶರೀರ' ಎಂದೆನಿಸಿ ಜೀವರಲ್ಲಿ ಇರುವನು. ಹೃದಯದಲ್ಲಿ ಇರುವವನಾದುದರಿಂದ 'ಹೃದಯ' ಎಂದೆನಿಸಿಯೇ ಭಗವಂತನು ಜೀವಸ್ವರೂಪದ ಹೃದಯದಲ್ಲೂ ಇರುವನು.[2] ಸುಖ ದುಃಖಗಳನ್ನು ಭೋಗಿಸುವ ಜೀವನೊಳಗಿರುವ ಭಗವಂತ 'ಜೀವ' ಎನಿಸುವನೆಂದು 'ತತ್ವವಿವೇಕ' ತಿಳಿಸಿದರೆ[3], ಜೀವನಲ್ಲಿರುವ ಭಗವಂತನು 'ಕ್ಷೇತ್ರಜ್ಞ' ಎನಿಸುವನೆಂದು 'ತತ್ತ್ವನಿರ್ಣಯ' ತಿಳಿಸಿದೆ.[4] ಜೀವಾಂತರ್ಯಾಮಿಯಾಗಿರುವ ಪರಮಾತ್ಮನನ್ನು 'ಆತ್ಮಾ' ಎಂದು 'ತಂತ್ರಭಾಗವತ' ಕರೆದರೆ,[5] ಮತ್ತೊಂದು ಪ್ರಮಾಣ ಅವನನ್ನು 'ಪ್ರತ್ಯಗಾತ್ಮಾ' ಎಂದು ಕರೆದಿದೆ.[6]

## ದೇಹದ ಹೃದಯದಲ್ಲಿ :

ಹೀಗೆ ಜೀವನ ಸ್ವರೂಪದಲ್ಲಿ ಶರೀರ, ಹೃದಯ, ಜೀವ, ಕ್ಷೇತ್ರಜ್ಞ, ಆತ್ಮಾ

---

1 ದೇಹಾಂಗುಷ್ಠಮಿತೋ ದೇಹೇ ಜೀವಾಂಗುಷ್ಠಮಿತೋ ಹೃದಿ । ಜೀವಸ್ಯ........
—ಕಾ. ಉ. ಭಾ. 2-4-18

2 ಯೋಽಸೌ ಜೀವೇ ಸ್ಥಿತೋ ವಿಷ್ಣುಃ ಶರೀರಮಿತಿನಾಮಕಃ ಶಂತ್ವಾಚ್ಚ ರತಿರೂಪತ್ವಾದೀಶಾಚ್ಚ ಸ ಏವ ತು । ಜೀವಚೈತನ್ಯರೂಪಸ್ಯ ಹೃದಯೇಽಪಿ ವ್ಯವಸ್ಥಿತಃ । ಅಯನಾದ್ಧೃದಿ ವಿಷ್ಣುಸ್ಸ ಹೃದಯಂ ಕೀರ್ತಿತೋ ಬುಧೈಃ ।
—ಸತ್ತತ್ತ್ವೇ (ಛಾ. ಉ. ಭಾ. 3-2-1)

3 ಭೋಕ್ತೃಸ್ಸು ಸುಖದುಃಖಾನಾಮಂತಃಸ್ಥೋ ಜೀವನಾಮಕಃ ।........ಭಗವಾನ್ ಪುರುಷೋತ್ತಮಃ—ತತ್ವವಿವೇಕ (ಛಾಂ. ಉ. ಭಾ. 6-3-10)

4 ಜೀವಸ್ಥೋ ಭಗವಾನ್ ವಿಷ್ಣುಃ ಕ್ಷೇತ್ರಜ್ಞ ಇತಿ ಗೀಯತೇ ।
—ತತ್ತ್ವನಿರ್ಣಯೇ (ಭಾಗ. ತಾ. ನಿ. 2-2-17)

* ಕ್ಷೇತ್ರಜ್ಞೇತ್ಯುಚ್ಯತೇ ವಿಷ್ಣುರ್ಜೀವಸ್ಥಃ ಪುರುಷೋತ್ತಮಃ ।
—ಭಾಗ. ತಾ. ನಿ. 5-11-14

5 ಜೀವಾಂತರ್ಯಾಮಕೋ ವಿಷ್ಣುರಾತ್ಮನಾಮಾ ಸಮೀರಿತಃ
—ತಂತ್ರಭಾಗವತ (ಭಾಗ. ತಾ. ನಿ. 11-7-42)

6 ಅಂತರ್ಯಾಮೀ ಪ್ರತ್ಯಗಾತ್ಮಾ ವ್ಯಾಪ್ತಃ ಕಾಲೋ ಹರಿಃ ಸ್ಮೃತಃ
—ಭಾಗ. ತಾ. ನಿ. 7-6-28

* ಸ್ವೇಚ್ಛಯೈವಾಽವೃತೋ ವಿಷ್ಣುರ್ಜೀವೇ ತಿಷ್ಠತಿ ನಿತ್ಯದಾ । ಯೋಽಸೌ ನಿಯಾಮಕಸ್ತಸ್ಯ ಜೀವಂ ಕ್ಷೇತ್ರಜ್ಞ ಇತಿ ಶಬ್ದಿತಃ —ಹರಿವ ಶೇಷು
(ಬೃ. ಉ. ಭಾ. 3-5-4)

ಪ್ರತ್ಯಗಾತ್ಮಾ—ಈ ಹೆಸರುಗಳನ್ನು ಹೊಂದಿ ಪರಮಾತ್ಮನು ಇರುವುದಾದರೆ, ಜೀವನ ಶರೀರದಲ್ಲೂ ಇರುವನು. ಜೀವನ ಶರೀರದಲ್ಲಿರುವ ಭಗವದ್ರೂಪಗಳಿಗೆ ಸಮಷ್ಟಿಯಾಗಿ 'ಅಧಿಯಜ್ಞ' ಎಂದು ಹೆಸರು.[1] ಎಲ್ಲರ ದೇಹದಲ್ಲಿ ಪರಮಾತ್ಮನು ರಕ್ಷಕನಾಗಿ ಇರುವುದರಿಂದಲೇ ಅಲ್ಲಿ ಜೀವನು ಅವಧ್ಯನಾಗಿ ಇರುವನು.[2] ದೇಹದಲ್ಲಿರುವ ಭಗವದ್ರೂಪಕ್ಕೆ ಪುರುಷ ಎಂಬ ಹೆಸರೂ ಇದೆ [3] ಪುರುಷನಾಮಕನಾದ ಭಗವಂತನು ದೇಹದೊಳಗಿದ್ದುಕೊಂಡು ಜ್ಞಾನವನ್ನು ನೀಡುವನೆಂದು ಮಾತ್ಸ್ಯ ತಿಳಿಸಿದೆ.[4]

ಶ್ರೀಹರಿಯು ಗುಣಪೂರ್ಣನಾಗಿರುವುದರಿಂದ ಹಾಗೂ ಪೂರ್ಣಕಾಮನಾಗಿರುವುದರಿಂದ 'ಬ್ರಹ್ಮಪುರ' ಎನಿಸಿರುವನು. ಅಂತಹ ವಿಷ್ಣುವಿಗೆ ಆವಾಸಸ್ಥಾನವಾಗಿರುವುದರಿಂದ ಜೀವರ ಶರೀರವೂ ಬ್ರಹ್ಮಪುರ ಎನಿಸಿದೆ. ಶರೀರದಲ್ಲಿ ವ್ಯಾಪಿಸಿರುವ ಶ್ರೀಹರಿಯಲ್ಲಿ ಹೃದಯವು ಆಶ್ರಿತವಾಗಿದೆ. ಆ ಹೃದಯದೊಳಗೆ ಇರುವ ಅಲ್ಪಾಕಾಶದಲ್ಲಿ ವ್ಯಾಪ್ತನಾದ ಶ್ರೀಹರಿಯು ಇರುವನು.[5] ಜೀವರ ದೇಹದ ಹೃದಯ

---

1 ದೇಹಸ್ಥವಿಷ್ಣುರೂಪಾಣಿ ಅಧಿಯಜ್ಞ ಇತೀರಿತಃ ।
— ಕಲ್ಪ (ಗೀ. ಭಾ. 8-4)

* ಪ್ರಾಣಿನಾಂ ದೇಹಗೋ ವಿಷ್ಣುರಧಿಯಜ್ಞ ಇತೀರಿತಃ ।
—ತತ್ತ್ವವಿವೇಕ (ಗೀ. ತಾ. 8-4)

2 ದೇಹೀ ನಿತ್ಯಮವಧ್ಯೋऽಯಂ ದೇಹೇ ಸರ್ವಸ್ಯ ಭಾರತ । —ಗೀ. 2-30

ದೇಹೀ ಕುತೋऽವಧ್ಯಃ? ಯಸ್ಮಾದಯಮೀಶ್ವರಃ ಸರ್ವಸ್ಯ ದೇಹೇ ರಕ್ಷಕತ್ವೇನ ಸ್ಥಿತಃ ಅತ ಏವಾವಧ್ಯಃ । ನ ಸ್ವಸಾಮರ್ಥ್ಯಂ ಕಸ್ಯಾಪಿ ।
—ಗೀ. ತಾ.

3 ವಿಷ್ಣೋಸ್ತು ಪುರುಷಾಖ್ಯಾನಿ ತ್ರೀಣಿ ರೂಪಾಣ್ಯಥೋ ವಿದುಃ....ತೃತೀಯಂ ದೇಹಿನಾಂ ದೇಹೇ....ಮಾಹಾತ್ಮ್ಯೇ (ಭಾಗ. ತಾ. ನಿ. 11-4-3)

4 ಅಂತಃಸ್ಥಃ ಪುರುಷೋ ನಾಮ ಜ್ಞಾನದಃ ಸರ್ವದೇಹಿನಾಮ್
—ಮಾತ್ಸ್ಯೇ (ಭಾಗ. ತಾ. ನಿ. 11-22-12)

5 ಬೃಹತ್ತ್ವಾತ್ ಪೂರ್ಣಕಾಮತ್ವಾತ್ ವಿಷ್ಣುರ್ಬ್ರಹ್ಮಪುರಾಭಿಧಃ ।
ತಸ್ಮಿನ್ ತಸ್ಯ ಪುರಂ ದೇಹಃ ತಸ್ಮಿನ್ ಹೃದಯಮಾಸ್ಥಿತಮ್ ।
ಹೃದಯಾಕಾಶಗೋ ವಿಷ್ಣುಃ ತಸ್ಮಿನ್ ಸರ್ವಮಿದಂ ಸ್ಥಿತಮ್ ।
—ಛಾಂ. ಉ. ಭಾ. 8-1-1

ದಲ್ಲಿರುವುದರಿಂದ ಶ್ರೀಹರಿಗೆ ಹೃದಯ ಎಂದೇ ಹೆಸರು.[1] ಹೃದಯಾಕಾಶದಲ್ಲಿ ಅನಿರುದ್ಧರೂಪಿ ಪರಮಾತ್ಮನು ಇರುವನೆಂದು 'ಬ್ರಹ್ಮಸಾರ' ತಿಳಿಸಿದೆ.[2] ದೇಹ ಎಂಬ ಪುರಗಳಲ್ಲಿ ಹೃದಯ ಎಂಬ ಪುರಗಳಲ್ಲಿ ನೆಲೆಸಿರುವುದರಿಂದ ದೇಹದ ಹೃದಯದಲ್ಲಿರುವ ಪರಮಾತ್ಮ ಪುರುಷ ಎನಿಸಿರುವನೆಂದು ಬೃಹದಾರಣ್ಯಕೋಪನಿಷತ್ತು ತಿಳಿಸಿದೆ.[3]

ಜೀವನ ಹೃದಯದಲ್ಲಿರುವ ಭಗವಂತನು ಪುರುಷ ಎನಿಸುವನೆಂದು ತಿಳಿಸುವ 'ಬ್ರಾಹ್ಮ' ಭಗವಂತನ ಆ ರೂಪವೇ ಜೀವನಿಗೆ ಜ್ಞಾನಪ್ರದವಾದುದೆಂದು ನಿರೂಪಿಸಿದೆ.[4] ಹೃದಯದಲ್ಲಿರುವ ಶ್ರೀಹರಿಯ ಮೂರ್ತಿಯು ಪ್ರತಿಬಿಂಬ ಜೀವನಾಗಿದ್ದು, ಅದರ ವಶದಲ್ಲಿಯೇ ಇರುವನೆಂದು ತಿಳಿಸುವ 'ವಿವೇಕ' ಭಗವಂತನ ಆ ಮೂರ್ತಿಯನ್ನು 'ಜೀವಕಲಾ' ಎಂದು ಕರೆದಿದೆ.[5]

---

* 'ದಹರ ಉತ್ತರೇಭ್ಯಃ' —ಬ್ರ.ಸೂ. 1-3-14

* 'ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುಃ' ಇತ್ಯಾದಿಭ್ಯ ಉತ್ತರೇಭ್ಯೋ ಗುಣೇಭ್ಯೋ ದಹರೋ ವಿಷ್ಣುರೇವ । —ಬ್ರ.ಸೂ.ಭಾ.

* 'ಪ್ರಸಿದ್ಧೇಶ್ಚ' —ಬ್ರ. ಸೂ. 1-3-17

* ತತ್ರಾಪಿ ದಹ್ರಂ ಗಗನಂ ವಿಶೋಕಸ್ತಸ್ಮಿನ್ ಯದಂತಸ್ತದುಪಾಸಿತವ್ಯಮ್
—ಬ್ರ. ಸೂ. ಭಾ.

1 ....ಅಸೌ ವಿಷ್ಣುರ್ಹೃದಯಂ ನಾಮ ತದ್ಗತೇಃ ।
—ಛಾಂ. ಉ. ಭಾ. 8-1-7

2 ಯ ಏಷ ಹೃದಯಾಕಾಶಸ್ತ್ವನಿರುದ್ಧಸ್ತು ತದ್ಗತಃ ।
—ಬ್ರಹ್ಮಸಾರ (ತೈ. ಭಾ. 1-13)

3 ಸ ವಾ ಅಯಂ ಪುರುಷಃ ಸರ್ವಾಸು ಪೂರ್ಷು ಪುರಿಶಯೋ
—ಬೃ. ಉ. 4-5 18
.... ...ಪುರುಷಃ ಪೂರ್ಷು ಸ್ಥಿತೇಃ । ಪುರಾಖ್ಯೇಷ್ವೇವ ದೇಹೇಷು ಹೃತ್ಪುರ್ಯಪಿ ವಸತ್ಯಸೌ....। —ಬೃ. ಉ. ಭಾ.

4 ಪುರುಷಾಖ್ಯೋ ಹೃದ್ಗತಸ್ತು ವಿಷ್ಣುರ್ಜೀವವಿಬೋಧಕಃ ।
—ಬ್ರಾಹ್ಮೇ (ಭಾಗ ತಾ. ನಿ. 11-22-12)

5 ಹೃದಿಸ್ಥಾ ಯಾ ಹರೇರ್ಮೂರ್ತಿರ್ಜೀವೋ ಯತ್ಪ್ರತಿಬಿಂಬಕಃ ।
ಯದ್ವಶೇ ವರ್ತತೇ ಜೀವಃ ಸಾ ತು ಜೀವಕಲಾ ಸ್ಮೃತಾ ।
—ವಿವೇಕೇ [ಭಾಗ. ತಾ. ನಿ. 11-27-22]

'ಆತ್ಮಾ' ಮತ್ತು 'ಅಂತರಾತ್ಮಾ' ರೂಪಗಳಿಂದ ಶ್ರೀಹರಿಯು ಜೀವರ ದೇಹದ ಹೃದಯಗುಹೆಯಲ್ಲಿದ್ದುಕೊಂಡು ಅವರವರ ಕರ್ಮದ ಶುಭಫಲವನ್ನು ನುಭವಿಸುವನೆಂದು ಕಾಠಕೋಪನಿಷತ್ತೇ ಮುಂತಾದವುಗಳಲ್ಲಿ ತಿಳಿಸಲಾಗಿದೆ.[1] ನಿದ್ರಾವಸ್ಥೆಯನ್ನು ನಿಯಂತ್ರಿಸುವ ಪ್ರಾಜ್ಞರೂಪಿ ಪರಮಾತ್ಮನು ಹೃದಯಾಕಾಶ ದಲ್ಲಿ ಇರುವನೆಂದು ಮಾಂಡೂಕೋಪನಿಷತ್ತು ತಿಳಿಸಿದೆ.[2] ಕಾಠಕೋಪನಿಷತ್ತು ಆಯಾ ಹೃದಯದಲ್ಲಿ ಇರುವ ಪರಮಾತ್ಮನು ಆಯಾ ಅಂಗುಷ್ಠದ ಪರಿಮಾಣವನ್ನು ಹೊಂದಿರುವನೆಂದು ಅಭಿಪ್ರಾಯಪಟ್ಟಿದ್ದರೆ, ಮತ್ತೊಂದು ಪ್ರಮಾಣವು ಹೃದಯ ಎನಿಸುವ ಮೂರು ಭಗವದ್ರೂಪಗಳು ಜೀವರ ದೇಹದ ಹೃದಯದಲ್ಲಿವೆ ಎಂದು ತಿಳಿಸಿ, ಅವುಗಳಲ್ಲಿ ಜೀವರಿಗೆ 'ಆಶ್ರಯ' ಆಗಿರುವ ರೂಪ ಪ್ರಾದೇಶ (ಚೋಟಳತೆ) ಪರಿಮಾಣವನ್ನು ಹೊಂದಿದ್ದು 'ಪ್ರಾದೇಶ' ಎಂಬ ಹೆಸರನ್ನೇ ಹೊಂದಿದೆ; ಹೃದಯ ಕಮಲದ ಮೊಗ್ಗಿನ ತುದಿಯಲ್ಲಿ ಇರುವ ರೂಪವು ಆಯಾ ಹೆಬ್ಬೆಟ್ಟಿನ ಪರಿಮಾಣ ವನ್ನು ಹೊಂದಿದ್ದು 'ಅಗ್ರೇಶ' ಎಂಬ ಹೆಸರನ್ನು ಹೊಂದಿದೆ. ನಿದ್ರಾವಸ್ಥೆಯಲ್ಲಿ ಜೀವರ ಪ್ರವೇಶಕ್ಕೆ ಆಧಾರನಾಗಿರುವ ಈ ಅಗ್ರೇಶನೇ ಎಚ್ಚರದ ಅವಸ್ಥೆಗೂ ಪ್ರಯೋಜಕ ಎಂಬುದಾಗಿ ವಿವರಿಸಿದೆ.[3]

---

1 ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ....'
—ಕಾ. ಉ. 1-7-1

* ಆತ್ಮಾಂತರಾತ್ಮೇತಿ ವಿಭುರೇಕ ಏವ ದ್ವಿಧಾ ಸ್ಥಿತಃ । ವಿಷ್ಣುಃ ಸ ಪರಮೋ ವಾಯೌ ಪರೇಭ್ಯೋಽಪ್ಯೂರ್ಧ್ವರೂಪಕೇ । ಶುಭಾನ್ ಪಿಬತಿ ಭೋಗಾನ್ ಸಃ....
—ಕಾ. ಉ. ಭಾ.

* ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್ — ಬ್ರ. ಸೂ. 1-2-11

* ಗುಹಾಂ ಪ್ರವಿಷ್ಟೌ ಪಿಬಂತೌ ವಿಷ್ಣುರೂಪೇ ಏವ —ಬ್ರ. ಸೂ. ಭಾ.

* ಆತ್ಮಾಽಂತರಾತ್ಮೇತಿ ಹರಿರೇಕ ಏವ ದ್ವಿಧಾ ಸ್ಥಿತಃ । ನಿವಿಷ್ಟೋ ಹೃದಯೇ ನಿತ್ಯಂ ರಸಂ ಪಿಬತಿ ಕರ್ಮಜಮ್ —ಬೃಹತ್ಸಂಹಿತಾಯಾಮ್ (ಬ್ರ. ಸೂ. ಭಾ.)

2 ಆಕಾಶೇ ಚ ಹೃದಿ ಪ್ರಾಜ್ಞಸ್ತ್ರಿಧಾ ದೇಹೇ ವ್ಯವಸ್ಥಿತಃ ।

3 ಹೃದಯೇ ಸರ್ವಶೋ ವ್ಯಾಪೀ ಪ್ರಾದೇಶಃ ಪುರುಷೋತ್ತಮಃ ।
ಜೀವಾನಾಂ ಸ್ಥಾನಮುದ್ದಿಷ್ಟಃ ಸರ್ವದೈವ ಸನಾತನಃ ।
ಹೃತ್ಕರ್ಣಿಕಾಮೂಲಗತಃ ಸ್ವಾಗುಂಷ್ಠಾಗ್ರಪ್ರಮಾಣಕಃ ।
ಮೂಲೇಶ ಇತಿ ನಾಮಾಸ್ಮಿನ್ ಸರ್ವೇ ಜೀವಾಃ ಪ್ರತಿಷ್ಠಿತಾಃ ।
ಅಂಗುಷ್ಠಮಾತ್ರೇ ಪುರುಷೇ ಕರ್ಣಿಕಾಗ್ರಸ್ಥಿತೇ ಹರೌ । ಪ್ರವಿಶಂತಿ ಸುಷುಪ್ತೌ ತು ಪ್ರಬುದ್ಧ್ಯಂತೇ ತತಸ್ತಥಾ । ಸೋಽಯಂ ತ್ರಿರೂಪೋ ಭಗವಾನ್ ಹೃದಯಾಖ್ಯಃ ಪ್ರಕೀರ್ತಿತಃ ॥ —ಬೃ. ಉ. ಭಾ. 6-1-8

'ಪರ್ಯಂಕೋಪಾಸನಾ' ಎಂಬ ಗ್ರಂಥವು ಜೀವರ ದೇಹದ ಹೃದಯದಲ್ಲಿ ಐದು ನಾಡಿಗಳಿದ್ದು ಆ ಐದು ನಾಡಿಗಳಲ್ಲಿ ಭಗವಂತನ ನಾರಾಯಣಾದಿ ಐದು ಅತ್ಯಂತ ಸೂಕ್ಷ್ಮರೂಪಗಳು ಇವೆ ಎಂದು ವಿವರಿಸಿದೆ. ಹೃದಯದ ಮಧ್ಯದಲ್ಲಿರುವ ಸುಷುಮ್ನಾ ನಾಡಿಯಲ್ಲಿ ಕೆಂಪು ಬಣ್ಣದ ನಾರಾಯಣ, ಪೂರ್ವದಲ್ಲಿರುವ ನಂದಿನೀ ನಾಡಿಯಲ್ಲಿ ಬಿಳಿಬಣ್ಣದ ವಾಸುದೇವ, ದಕ್ಷಿಣದಲ್ಲಿರುವ ಪಿಂಗಲಾ ಎಂಬ ನಾಡಿಯಲ್ಲಿ ಕೆಂಪು ಮಿಶ್ರಿತ ಕಪ್ಪು ಬಣ್ಣದ ಸಂಕರ್ಷಣ, ಪಶ್ಚಿಮದಲ್ಲಿರುವ ವಜ್ರಿಕಾ ಎಂಬ ನಾಡಿಯಲ್ಲಿ ಹಳದಿ ಬಣ್ಣದ ಪ್ರದ್ಯುಮ್ನ ಉತ್ತರದಲ್ಲಿರುವ ಇಡಾ ಎಂಬ ನಾಡಿಯಲ್ಲಿ ನೀಲಬಣ್ಣದ ಅನಿರುದ್ಧ ಇರುವನು.[1]

ಕೆಳಮುಖವಾದ ಕಮಲದ ಮೊಗ್ಗಿನಂತೆ ಹೃದಯಕೋಶ ಇದೆ. ಅದರ ಒಳಗೆ ಸಣ್ಣ ಅವಕಾಶವಿದೆ—ಎಂದು ಹೃದಯಾಕಾಶದ ದಹರಾಕಾಶ ಎನಿಸುವ ಹೃದಯಗುಹೆಯನ್ನು ಪರಿಚಯಿಸಿಕೊಡುವ 'ನಾರಾಯಣೋಪನಿಷತ್ತು' ಅಂತಹ ಹೃದಯಗುಹೆಯೊಳಗೆ ಬೆಂಕಿಯ ಎಳೆಯಂತಹ ಅರಿವಿನ ಪುಂಜರೂಪದ ಜೀವ ಸ್ವರೂಪ ಇದೆ. ಅದರ ಮಧ್ಯದಲ್ಲಿ ಪರಮಾತ್ಮನಿರುವನು—ಎಂದು ನಿರೂಪಿಸಿದೆ.[2] ಅರುಣಿಮುನಿಗಳು ಹೃದಯದಲ್ಲಿದ್ದು ಹೃದಯ ಎನಿಸುವ ಭಗವಂತನನ್ನು ಉಪಾಸನೆ ಮಾಡಿ ಭಗವಂತನನ್ನು ಹೊಂದಿರುವರು.[3]

---

1 ಸ ಏಷ ಹೃದಿ ನಾಡೀಷು ಪಂಚರೂಪಃ ಪ್ರತಿಷ್ಠಿತಃ । ವಿಷ್ಣೋರಣಿಮ್ನೋ ರೂಪಾಣಿ ಪಂಚನಾಡೀಸ್ಥಿತಾನಿ ತು । ನಾರಾಯಣಾಖ್ಯಂ ಸೌಷುಮ್ನಂ ಮಧ್ಯಸ್ಥಂ ರಕ್ತವರ್ಣಕವತ್ । ಶುಕ್ಲಂ ತು ವಾಸುದೇವಾಖ್ಯಂ ನಂದಿನ್ಯಾಮಗ್ರತಃ ಸ್ಥಿತವತ್ । ಪಿಂಗಲಾಯಾಂ ಪಿಂಗಲಂ ಚ ರೂಪಂ ಸಂಕರ್ಷಣಾಭಿಧವತ್ । ಪಶ್ಚಿಮೇ ವಜ್ರಿಕಾಯಾಂ ಚ ಪೀತಂ ಪ್ರದ್ಯುಮ್ನನಾಮಕವತ್ । ಇಡಾಯಾಮನಿರುದ್ಧಾಖ್ಯಂ ನೀಲರೂಪಂ ವ್ಯವಸ್ಥಿತವತ್ —ಪರ್ಯಂಕೋಪಾಸನಾಯಾಮ್
(ಬೃ. ಉ. ಭಾ. 8-1-10)

2 ಪದ್ಮಕೋಶ ಪ್ರತೀಕಾಶಂ ಹೃದಯಂ ಚಾಪ್ಯಧೋಮುಖಮ್ ।....
....ತಸ್ಯಾಂತೇ ಸುಷಿರಂ ಸೂಕ್ಷ್ಮಂ....ತಸ್ಯ ಮಧ್ಯೇ ವಹ್ನಿಶಿಖಾ ಅಣೀಯೋರ್ಧ್ವಾ ವ್ಯವಸ್ಥಿತಾ । ತಸ್ಯಾಃ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ
—ನಾರಾಯಣೋಪನಿಷತ್

3 '....ಉಪಾಸತೇ ಹೃದಯಂ ಬ್ರಹ್ಮೇತ್ಯಾರುಣಯೋ....'
—ಐ. ಉ. 1-3-8

* ಹೃತ್ಸ್ಥಮೇವ ಪರಂ ವಿಷ್ಣುಂ ಧ್ಯಾಯಂತ್ಯಾರುಣಯಃ ಸದಾ ।
—ಐ. ಉ. ಭಾ.

* ....ಹೃದಯಮಾರುಣಯೋ ದಹರಮ್ —ಭಾ 10-94-18

* ಯಸ್ಮಾಚ್ಚಾರುಣಯೋ ಹೃದ್ಯಯನಾತ್ ಹೃದಯನಾಮಕಮ್, ತಸ್ಮಾದೇವ

* ತತ್ ಸಮುಪೇತ್ಯ ನ ಪತಂತಿ ಕೃತಾಂತಮುಖೇ —ಭಾಗ. ತಾ. ನಿ.

**ದೇಹದ ಮೂರು ಮತ್ತು ಐದು ಸ್ಥಾನಗಳಲ್ಲಿ :**

ಶ್ರೀ ಹರಿಯು ಚತುರ್ಮುಖನ ಶರೀರವನ್ನು ಬ್ರಹ್ಮವಾಯುಗಳಿಂದ ಕೂಡಿಕೊಂಡು ವಾಸುದೇವರೂಪದಿಂದ ಮಸ್ತಕದಲ್ಲಿರುವ ಸುಷುಮ್ನಾ ನಾಡಿಯ ಮೂಲಕ ಪ್ರವೇಶಿಸಿದನು. ಪಾದದ ತುದಿಗಳ ಮೂಲಕ ನಾರಾಯಣರೂಪದಿಂದ ಪ್ರವೇಶ ಮಾಡಿದನು. ಬಲಗಣ್ಣು, ಕಂಠ ಹಾಗೂ ಹೃದಯ ಈ ಮೂರು ಭಾಗಗಳಲ್ಲಿ ಅನಿರುದ್ಧ, ಪ್ರದ್ಯುಮ್ನ ಹಾಗೂ ಸಂಕರ್ಷಣ ರೂಪಗಳಿಂದ ಜಾಗ್ರದಾದ್ಯವಸ್ಥಾ ಪ್ರೇರಕನಾಗಿ ಇರುವನು. ವಾಸುದೇವ ರೂಪದಿಂದ ಮಸ್ತಕದಲ್ಲಿ ಸುಷುಮ್ನಾ ನಾಡಿಯಲ್ಲಿ ಇದ್ದರೆ, ಸುಷುಮ್ನಾ ನಾಡಿಯಲ್ಲಿಯೇ ಮಧ್ಯೇ ಬ್ರಹ್ಮನಾಡಿಯಲ್ಲಿ ನಾರಾಯಣ ರೂಪದಿಂದ ಇರುವನು—ಎಂದು ತಿಳಿಸುವ 'ಐತರೇಯ ಸಂಹಿತೆ' ಇದೇ ರೀತಿಯಾಗಿ ಎಲ್ಲ ಜೀವರಲ್ಲೂ ಶ್ರೀವಿಷ್ಣುವು ಪ್ರವೇಶಿಸಿರುವನೆಂದು ತಿಳಿಸಿದೆ.[1]

ಜೀವರ ಜಾಗ್ರದವಸ್ಥೆಯನ್ನು ಪ್ರೇರಿಸುವ 'ವಿಶ್ವ' ಎನಿಸುವ ಭಗವದ್ರೂಪ ಜೀವರ ದೇಹದ ಬಲಗಣ್ಣಿನ ತುದಿಯಲ್ಲಿದ್ದರೆ, ಸ್ವಪ್ನಾವಸ್ಥೆಯನ್ನು ಪ್ರೇರಿಸುವ 'ತೈಜಸ' ಎನಿಸುವ ಭಗವದ್ರೂಪ ದೇಹದ ಕಂಠದಲ್ಲಿರುವ ಚಿತ್ತದಲ್ಲಿ ಇರುವುದು. ನಿದ್ರಾವಸ್ಥೆಯನ್ನು ಪ್ರೇರಿಸುವ ಪ್ರಾಜ್ಞ ಎನಿಸುವ ಭಗವಂತನು ಹೃದಯಾಕಾಶದಲ್ಲಿ ಇರುವನು.[2] ಈ ಮೂರು ಭಗವದ್ರೂಪಗಳು ಆತ್ಮಾ, ಅಂತರಾತ್ಮಾ, ಪರ

---

1 ....ತಸ್ಮಾದೇಷಾಂ ಪ್ರವೃತ್ತ್ಯರ್ಥಂ ಪ್ರವೇಕ್ಷ್ಯೇ ಸಹ ವಾಯುನಾ । ಇತಿ ಮತ್ವಾ ವಿರಿಂಚಸ್ಯ ಶರೀರಂ ಪ್ರವಿವೇಶ ಸಃ । ಮೂರ್ಧನ್ಯನಾಡ್ಯಾ ಪ್ರಥಮಂ ಬ್ರಹ್ಮವಾಯುಸಮನ್ವಿತಃ ।....ಪ್ರಪದಾಭ್ಯಾಂ ತಥಾನ್ಯೇನ ರೂಪೇಣ ಪ್ರವಿವೇಶ ಸಃ ।....ನಾರಾಯಣೋ ವಾಸುದೇವ ಇತಿ ದ್ವೇಧಾ ವ್ಯವಸ್ಥಿತಃ । ಮೂರ್ಧ್ನಿವಿಷ್ಣೋ ವಾಸುದೇವಸ್ತಸ್ಯ ಚಾವಸಥಾಸ್ತ್ರಯಃ । ಆಕ್ಷಿ ಕಂಠೋ ಹೃದಿತ್ಯೇವಂ....ಅನಿರುದ್ಧಾದಿರೂಪೇಣ ತ್ರಿಧಾ ತೇಷು ವ್ಯವಸ್ಥಿತಃ । ದಾತಾವಸ್ಥಾ-ತ್ರಯಸ್ಯಾಸ್ಯ ಜೀವಸ್ಯ ಕ್ರಮಶೋ ವಿಭುಃ । ಸುಷುಮ್ನಾಯಾಂ ವಾಸುದೇವೋ ಮೂರ್ಧನ್ಯೇವ ವ್ಯವಸ್ಥಿತಃ । ತಸ್ಯಾಮೇವ ಬ್ರಹ್ಮನಾಡ್ಯಾಂ ಸ್ಥಿತೋ ನಾರಾಯಣಃ ಪ್ರಭುಃ ।....ತಥಾ ಜೀವೇಷು ಸರ್ವೇಷು ಪ್ರವಿಷ್ಟಃ ಪ್ರೇರಣೇಚ್ಛಯಾ

—ಐತರೇಯಸಂಹಿತಾ (ಐ. ಉ. ಭಾ. 2-3-3-9)

2 ದಕ್ಷಿಣಾಕ್ಷಿಮುಖೇ ವಿಶ್ವೋ ಮನಸ್ಯಂತಸ್ತು ತೈಜಸಃ । ಆಕಾಶೇ ಚ ಹೃದಿ ಪ್ರಾಜ್ಞಸ್ತ್ರಿಧಾ ದೇಹೇ ವ್ಯವಸ್ಥಿತಃ —ಮಾ. ಉ. 1-1-8

* ದಕ್ಷಿಣಾಕ್ಷಿಸ್ಥಿತೋ ವಿಷ್ಣುರ್ಭುಂಕ್ತೇಽರ್ಥಾನ್ ಜಾಗ್ರದಾಸ್ಥಿತಾನ್ ।
ಕಂಠಸಂಸ್ಥಸ್ತಥಾ ಸ್ವಾಪ್ನಾನ್ ಜೀವಾನಂದಂ ಚ ಸುಪ್ತಿಗಃ ।

—ಸತ್ತತ್ವೇ |ಭಾಗ. ತಾ. ನಿ. 11-13-32

ಮಾತ್ಮಾ ಎಂದೂ ಕರೆಸಿಕೊಳ್ಳುವುದಿದೆ.[1] ಹೃದಯಕಮಲದಲ್ಲಿ ಅನಿರುದ್ಧ, ಕಿರು ನಾಲಗೆಯಲ್ಲಿ ಪ್ರದ್ಯುಮ್ನ, ನೆತ್ತಿಯಲ್ಲಿ ಹಕ್ಕಿಯ ರೂಪದಲ್ಲಿರುವ ಸಂಕರ್ಷಣ, ತಲೆಯಿಂದ 12 ಅಂಗುಲಮೇಲು ಬದಿಯಲ್ಲಿ ವಾಸುದೇವ—ಹೀಗೆ ನಾಲ್ಕು ಭಗವ ದ್ರೂಪಗಳನ್ನು ಬ್ರಹ್ಮಸಾರ ತಿಳಿಸಿದೆ.[2]

'ತಂತ್ರಸಾರಸಂಗ್ರಹ'ದಲ್ಲಿ ವೃಷಣದ ಮೂಲದಲ್ಲಿ, ಹೊಕ್ಕುಳಲ್ಲಿ, ಹೃದಯ ದಲ್ಲಿ, ಕಿರುನಾಲಗೆಯಲ್ಲಿ, ಹುಬ್ಬುಗಳ ಮಧ್ಯದಲ್ಲಿ, ನೆತ್ತಿಯಲ್ಲಿ ಹಾಗೂ ಶಿರಸ್ಸಿ ನಿಂದ ಹನ್ನೆರಡು ಅಂಗುಲಗಳಷ್ಟು ಎತ್ತರದಲ್ಲಿ ವಾಸುದೇವಾದಿ ಪಂಚರೂಪಿ ಪರಮಾತ್ಮನನ್ನು ಧ್ಯಾನಿಸಬೇಕೆಂದು ವಿಧಿಸಿರುವುದರಿಂದ[3] ಆಯಾ ಸ್ಥಳಗಳಲ್ಲಿ ಆಯಾ ರೂಪದಿಂದ ಭಗವಂತನಿರುವನೆಂದು ಸಿದ್ಧಿಸುವುದು. ಹಾಗೆಯೇ ಧನ್ವಂತರಿ ಮಂತ್ರದ ಧ್ಯಾನ ಶ್ಲೋಕದಲ್ಲಿ ಜಪಿಸುವವನು ತನ್ನ ಶಿರಸ್ಸಿನಲ್ಲಿ, ಹುಬ್ಬುಗಳ ಮಧ್ಯ ದಲ್ಲಿ, ಕಿರುನಾಲಗೆಯಲ್ಲಿ, ಹೃದಯದಲ್ಲಿ, ಹೊಕ್ಕುಳಲ್ಲಿ ಹಾಗೂ ವೃಷಣದ ಕೆಳಭಾಗ ದಲ್ಲಿ—ಹೀಗೆ ಷಟ್‌ಚಕ್ರಗಳಲ್ಲೂ ಸನ್ನಿಹಿತನಾದ ಧನ್ವಂತರಿಯಿಂದ ಸುರಿಯುತ್ತಿರುವ ಅಮೃತಧಾರೆಯನ್ನು ನೆನೆಯಬೇಕೆಂದು ತಿಳಿಸಿರುವುದರಿಂದ ಆ ಆರು ಸ್ಥಳಗಳಲ್ಲೂ ಧನ್ವಂತರಿರೂಪಿ ಪರಮಾತ್ಮನಿರುವನೆಂದು ಸೂಚಿತವಾಗುವುದು.[4]

---

1 ಆತ್ಮಾಽಂತರಾತ್ಮಾ ಪರಮಾತ್ಮೇತಿ ಮೂರ್ತಿತ್ರಯಂ ಹರೇಃ । ಜಾಗ್ರತ್‌ಸ್ವಪ್ನ-ಸುಷುಪ್ತೀನಾಂ ಸೃಷ್ಟ್ಯಾದೇಶ್ಚ ಪ್ರವರ್ತಕಮ್ —ತ್ರೈಕಾಲ್ಯೇ
(ಭಾಗ. ತಾ. ನಿ. 11-29-7)

2 ಯ ಏಷ ಹೃದಯಾಕಾಶಸ್ತ್ವನಿರುದ್ಧಸ್ತು ತದ್ಗತಃ । ಪ್ರದ್ಯುಮ್ನಸ್ತಾಲು-ಮಧ್ಯಸ್ಥೋ ಲಂಬಿನ್ಯಾಮಿಂದ್ರನಾಮಕಃ । ವ್ಯಾಖ್ಯಃ ಸುಪರ್ಣರೂಪತ್ವಾತ್ ಕೇಶಾಂತೇ ವರ್ತತೇ ತು ಯಃ । ಸಂಕರ್ಷಣಃ ಸುಪರ್ಣಾತ್ಮಾ ವಾಸುದೇವೋ ವ್ಯಪಃ ಸ್ಮೃತಃ । ಯಸ್ಮಾತ್ ವ್ಯಪಗತೇ ಸ್ಥಾತಾ ಜಗತಿ ಪ್ರಳಯೋ ಪ್ರಭುಃ । ಆಶೀರ್ಷ-ಕಪಾಲೋಽಸೌ ಕಪಾಲಾದುಪರಿ ಸ್ಥಿತಃ ।
—ಬ್ರಹ್ಮಸಾರೇ [ತ್ರೈ. ಉ. ಭಾ. 1-13]

3 ಮೂಲೇ ಚ ನಾಭೌ ಹೃದಯೇಂದ್ರಯೋನಿಭ್ರೂಮಧ್ಯಮೂರ್ಧದ್ವಿಷಡಂತಕೇಷು .... ಪಂಚಾತ್ಮಕೋಽಸೌ ಭಗವಾನ್ ಸದೈವ ಧ್ಯೇಯಃ........’
—ತಂತ್ರಸಾರಸಂಗ್ರಹ 4-152

4 ಮೂರ್ಧ್ನಿ ಸ್ಥಿತಾದಮುತ ಏವ ಸುಧಾಂ ಸ್ರವಂತೀಂ
ಭ್ರೂಮಧ್ಯಗಾಚ್ಚ ತತ ಏವ ಚ ತಾಲುಸಂಸ್ಥಾತ್ ।
ಹಾರ್ದಾಚ್ಚ ನಾಭಿಸದನಾದಧರಸ್ಥಿತಾಚ್ಚ ಧ್ಯಾತ್ವಾ........’
—ತಂ. ಸಾ. ಸಂ. 4-96

**ಐದು ಸ್ಥಳಗಳಲ್ಲಿ :**

ಜೀವರ ದೇಹದ ಒಳಗೆ ಅದೇ ಆಕಾರದಲ್ಲಿ ಅನ್ನಮಯ ಎಂಬ ಹೆಸರಿನ ಅನಿರುದ್ಧರೂಪಿ ಭಗವಂತನಿರುವನು.[1] ಪ್ರಾಣಮಯ ಕೋಶದಲ್ಲಿ 'ಪ್ರಾಣಮಯ' ಹೆಸರಿನ ಪ್ರದ್ಯುಮ್ನನಿರುವನು.[2] ಮನೋಮಯ ಕೋಶದಲ್ಲಿ 'ಮನೋಮಯ' ಹೆಸರಿನ ಸಂಕರ್ಷಣನಿರುವನು.[3] ವಿಜ್ಞಾನಮಯ ಕೋಶದಲ್ಲಿ 'ವಿಜ್ಞಾನಮಯ' ಹೆಸರಿನ ವಾಸುದೇವನಿರುವನು. ಆನಂದಮಯ ಕೋಶದಲ್ಲಿ ಆನಂದಮಯ ಹೆಸರಿನ ನಾರಾಯಣನಿರುವನು.[4]

ಭಗವಂತನು ದೇಹದ ಪ್ರಾಣವಾಯುವಿನಲ್ಲಿ ನಾರಾಯಣ, ವ್ಯಾನವಾಯು ವಿನಲ್ಲಿ ವಾಸುದೇವ, ಅಪಾನ ವಾಯುವಿನಲ್ಲಿ ಸಂಕರ್ಷಣ, ಉದಾನ ವಾಯುವಿನಲ್ಲಿ ಪ್ರದ್ಯುಮ್ನ, ಸಮಾನ ವಾಯುವಿನಲ್ಲಿ ಅನಿರುದ್ಧ, ಹಾಗೆಯೇ ದೇಹದ ಚಕ್ಷುಸ್‌ನಲ್ಲಿ ನಾರಾಯಣ, ಶ್ರೋತ್ರದಲ್ಲಿ ವಾಸುದೇವ, ಮನಸ್ಸಿನಲ್ಲಿ ಸಂಕರ್ಷಣ, ವಾಕ್‌ನಲ್ಲಿ ಪ್ರದ್ಯುಮ್ನ, ತ್ವಕ್‌ನಲ್ಲಿ ಅನಿರುದ್ಧ, ಹಾಗೆಯೇ ಚರ್ಮದಲ್ಲಿ ನಾರಾಯಣ, ಮಾಂಸ ದಲ್ಲಿ ವಾಸುದೇವ, ಸ್ನಾವಾದಲ್ಲಿ ಸಂಕರ್ಷಣ, ಎಲುಬಿನಲ್ಲಿ ಪ್ರದ್ಯುಮ್ನ, ಮಜ್ಜೆಯಲ್ಲಿ ಅನಿರುದ್ಧ ಈ ರೂಪಗಳಿಂದ ಇದ್ದು ಆಯಾ ವಸ್ತುಗಳು ತಮ್ಮ ತಮ್ಮ ಕಾರ್ಯ ನಿರ್ವಹಿಸುವಂತೆ ಬಲಪಡಿಸುವನು.[5]

---

1 ಅನ್ನಾತ್ಮನಿ ಶರೀರೇऽಸೌ ವ್ಯಜ್ಯತೇ ಸುವಿವೇಕಿಭಿಃ ।.......
ಪ್ರಚುರಂ ಮಯ ಇತ್ಯುಕ್ತಂ ಪ್ರಚುರಾತ್ಮಾ ಯತೋ ಹರಿಃ ।
ಪ್ರಚುರೈಃ ಸೇವ್ಯತೇ ನಿತ್ಯಮತೋऽನ್ನಮಯ ಈರಿತಃ ।
ದೇಹಸ್ಯೈವ ಶಿರಸ್ಯಸ್ಯ ಶಿರೋ ವಿಷ್ಣೋಃ ಪ್ರತಿಷ್ಠಿತಮ್ ।
ಬಾಹ್ವೋಃ ಪಕ್ಷೌ ತಥಾ ಮಧ್ಯೇ ಮಧ್ಯಂ ಪಶ್ಚಾತ್ತನೌ ತಥಾ ।
ಪುಚ್ಛಮಿತ್ಯೇಷ ಭಗವಾನನಿರುದ್ಧಃ ಸ್ವಯಂ ಹರಿಃ
—ಯಾಜುಃಸಂಹಿತಾ (ತೈ. ಉ. 2-3)

2 ತಸ್ಮಾದಂತರಂ ಪರಂರೂಪಮಭಿನ್ನಮಪಿ ಭಿನ್ನವತ್ ।
ಪ್ರದ್ಯುಮ್ನಾಖ್ಯಂ ಪ್ರಾಣಮಯಂ.... —ಯಾಜುಃಸಂಹಿತಾ (ತೈ. ಉ. 2-4)

3 ....ತಸ್ಮಿನ್ ಸಂಕರ್ಷಣಃ ಸ್ಥಿತಃ —ಯಾಜುಃಸಂಹಿತಾ ।

4 ತಸ್ಮಿನ್ನಾನಂದರೂಪೋऽಸೌ ಸ್ಥಿತೋ ನಾರಾಯಣಃ ಸದಾ —ಯಾಜುಃಸಂಹಿತಾ

5 ಅಥಾಧ್ಯಾತ್ಮಮ್ । ಪ್ರಾಣೋ ವ್ಯಾನೋऽಪಾನ ಉದಾನಃ ಸಮಾನಃ ।
ಚಕ್ಷುಃ ಶ್ರೋತ್ರಂ ಮನೋ ವಾಕ್ ತ್ವಕ್ । ಚರ್ಮ ಮಾಂಸಂ ಸ್ನಾವಾಸ್ಥಿ ಮಜ್ಜಾ ।
ಏತದಧಿ ವಿಧಾಯ ಋಷಿರವೋಚತ್ । ಪಾಂಕ್ತಂ ವಾ ಇದಂ ಸರ್ವಮ್ ।
ಪಾಂಕ್ತೇನೈವ ಪಾಂಕ್ತಂ ಸ್ಪೃಣೋತೀತಿ । —ತೈ. ಉ. 1-15

* ಪೃಥಿವ್ಯಾದ್ಯಂ ಪಾಂಕ್ತಷಟ್ಕಂ ಪಾಂಕ್ತೇನೈವ ಸ್ವಯಂ ಹರಿಃ ।
ನಾರಾಯಣಾದಿರೂಪೇಣ ಬಲಯತ್ಯಂಜಸಾ ವಿಭುಃ ।
—ತತ್ತ್ವಸಂಹಿತಾ (ತೈ. ಉ. ಭಾ.)

ಶ್ರೀ ಹರಿಯು ಪುರುಷನ ದೇಹದಲ್ಲಿ ಇರುವ ಪಂಚಭೂತಗಳಲ್ಲಿ ಪಂಚರೂಪನಾಗಿ ಇರುವನು. ದೇಹದಲ್ಲಿ ಉಷ್ಣವಾಗಿರುವುದೇ ಅಗ್ನಿ. ಅದರಲ್ಲಿ ಜ್ಯೋತಿರ್ನಾಮಕ ಪ್ರದ್ಯುಮ್ನನಿದ್ದಾನೆ. ಕಿವಿ, ಮೂಗು ಮುಂತಾದವುಗಳ ಒಳಗಿನ ಅವಕಾಶವೇ ಆಕಾಶ. ಇದರಲ್ಲಿ ಆಕಾಶನಾಮಕನಾಗಿ ವಾಸುದೇವನಿದ್ದಾನೆ. ರಕ್ತ, ಕಫ, ರೇತಸ್ಸು, ಜಲ ಇದರಲ್ಲಿ ಅಪ್‌ನಾಮಕನಾಗಿ ಅನಿರುದ್ಧನಿದ್ದಾನೆ. ಗಟ್ಟಿಯಾದ ಎಲುಬು ಮುಂತಾದ ಭಾಗವೇ ಪೃಥಿವಿ. ಇದರಲ್ಲಿ ಪೃಥಿವಿನಾಮಕನಾಗಿ ನಾರಾಯಣನಿದ್ದಾನೆ. ಹಾಗೆಯೇ ದೇಹದಲ್ಲಿ ಇರುವ ಪಂಚಪ್ರಾಣರಲ್ಲಿ ಅನಿರುದ್ಧಾದಿ ಪಂಚರೂಪಗಳಿಂದ ಇರುವನು.

ದೇಹದಲ್ಲಿರುವ ಪ್ರಾಣವೆ ವಾಯು. ಅದರಲ್ಲಿ ವಾಯುನಾಮಕ ಸಂಕರ್ಷಣನಿದ್ದಾನೆ. ಸಂಕರ್ಷಣನಿಂದ ಅಧಿಷ್ಠಿತವಾದ ಈ ವಾಯು ಪ್ರಾಣ, ಅಪಾನ, ವ್ಯಾನ, ಉದಾನ ಹಾಗೂ ಸಮಾನಗಳೆಂದು ಐದು ವಿಧ. ಇದರಲ್ಲಿ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ ವಾಸುದೇವ ಹಾಗೂ ನಾರಾಯಣ—ಎಂದು ಐದು ರೂಪಗಳಿಂದ ಕ್ರಮವಾಗಿ ಇರುವನು.[1]

ಶರೀರದಲ್ಲಿ ಮುಖ್ಯಪ್ರಾಣನೆಂಬ ಅಗ್ನಿಯ ಜ್ವಾಲೆಗಳಿವೆ. ಅವುಗಳಲ್ಲಿ ಜ್ವಾಲೆಗಳಿಂದ ಕೂಡಿದ ಕೇಶವನಿರುವನು.[2]

**ಇಂದ್ರಿಯಗಳಲ್ಲಿ :**

ಪ್ರತ್ಯಕ್ಷ ಎನಿಸುವ ಭಗವಂತನು ಪ್ರತಿಯೊಂದು ಇಂದ್ರಿಯದಲ್ಲೂ

---

1 ಸ ಏಷ ಪುರುಷಃ ಪಂಚವಿಧಸ್ತಸ್ಯ ಯದುಷ್ಣಂ ತಜ್ಜ್ಯೋತಿರ್ಯಾನಿ ಖಾನಿ ಸ ಆಕಾಶೋಽಥ ಯಲ್ಲೋಹಿತಂ ಶ್ಲೇಷ್ಮಾ ರೇತಸ್ತಾ ಆಪೋ ಯಚ್ಛರೀರಂ ಸಾ ಪೃಥಿವೀ ಯಃ ಪ್ರಾಣಃ ಸ ವಾಯುಃ ಸ ಏಷ ವಾಯುಃ ಪಂಚವಿಧಃ ಪ್ರಾಣೋಽಪಾನೋ ವ್ಯಾನ ಉದಾನಃ ಸಮಾನಃ.... —ಐ.ಉ. 2-2-3-2

* ಪುರುಷಸ್ಥಪಂಚಭೂತೇಷು ಪಂಚರೂಪೋ ಹರಿಃ ಸ್ಥಿತಃ ।
ಪ್ರದ್ಯುಮ್ನಾದಿ ಸ್ವರೂಪೇಣ ಜ್ಯೋತಿರಾದೌ ಪೃಥಕ್ ಪೃಥಕ್ ।
ಸ ಏವ ತು ಪುನರ್ವಾಯೌ ಪಂಚಧಾವಸ್ಥಿತೇ ಪ್ರಭುಃ ।
ಪ್ರಾಣಾದಿರೂಪೇ ವಸತಿ ಹ್ಯನಿರುದ್ಧಾದಿ ರೂಪವಾನ್ ।
ಅನಿರುದ್ಧಃ ಸ ಪ್ರದ್ಯುಮ್ನಸ್ತಥಾ ಸಂಕರ್ಷಣಃ ಪ್ರಭುಃ ।
ವಾಸುದೇವೋ ನಾರಾಯಣಃ ಪಂಚರೂಪ ಇತಿ ಕ್ರಮಾತ್ —ಐ. ಉ. ಭಾ.

2 ಪ್ರಾಣಾಗ್ನೇರರ್ಚಿಷೋ ದೇಹೇ ವಿತತಾಸ್ತೇಷು ಕೇಶವಃ ।
ಅರ್ಚಿಷ್ಮಾನ್ ವಿತತೋ ನಿತ್ಯಂ.... —ಐ.ಉ.ಭಾ. 2-8-4-8

ನಿಯಾಮಕನಾಗಿ ಇರುವನು.[1] ಅಂತರ್ಯಾಮಿ ಬ್ರಾಹ್ಮಣದಲ್ಲಿ ಘ್ರಾಣೇಂದ್ರಿಯ, ವಾಗಿಂದ್ರಿಯ, ಚಕ್ಷುರಿಂದ್ರಿಯ, ಶ್ರೋತ್ರೇಂದ್ರಿಯ, ಮನಸ್ಸು ಹಾಗೂ ತ್ವಗಿಂದ್ರಿಯ ಇವುಗಳನ್ನು ಉಲ್ಲೇಖಿಸಿ ಇವುಗಳಲ್ಲಿ ಭಗವಂತನು ಅಂತರ್ಯಾಮಿ ಯಾಗಿ ಇರುವುದನ್ನು ಸಂದೇಶಿಸಲಾಗಿದೆ.[2] ಶ್ರೀವಿಷ್ಣು ಮನೋನಾಮಕನಾಗಿ ಮನಸ್ಸಿನಲ್ಲೂ, ವಾಕ್‌ನಾಮಕನಾಗಿ ವಾಗೀಂದ್ರಿಯದಲ್ಲೂ, ಪ್ರಾಣನಾಮಕನಾಗಿ ಘ್ರಾಣೇಂದ್ರಿಯದಲ್ಲೂ ಇರುವನು.[3] ವಾಗಿಂದ್ರಿಯದಲ್ಲಿ ಸ್ತ್ರೀರೂಪದಿಂದಲೂ ಶ್ರೀವಿಷ್ಣುವು ಇರುವನು.[4] ಚಕ್ಷುಸ್ಸಿನಲ್ಲಿ ಚಕ್ಷುರ್ನಾಮಕನಾಗಿ ಭಗವಂತನಿರುವನು.[5] ನಿರ್ಲಿಪ್ತನಾದ ವಾಮನನಾಮಕನಾದ ಭಗವಂತನು ಚಕ್ಷುಸ್ಸಿನಲ್ಲಿ ನೆಲೆಸಿರುವುದ ರಿಂದಾಗಿ ಚಕ್ಷುರಿಂದ್ರಿಯ ಯಾವ ವಸ್ತುವಿನ ಲೇಪಕ್ಕೂ ಒಳಗಾಗುವುದಿಲ್ಲ—ಎಂದು 'ಮಹಾಕೌರ್ಮ' ತಿಳಿಸಿದೆ.[6] ಭಗವಂತನು ಅನಾದ್ಯನಂತನಾಗಿರುವನಾದರೂ ವೈಕಾರಿಕ ದೇವತಾಗಣದಲ್ಲಿ ಸೇರಿದವನಾಗಿ ಅವತರಿಸಿ, ಪಾದದ ಅಂಗುಷ್ಠದಲ್ಲಿ ನೆಲೆಸಿರುವನು. ಯಜ್ಞನಾಮಕನಾದ ಇವನು ಯಜ್ಞ ಎನಿಸುವ ಪಾದದೇವತೆಯಲ್ಲಿ ಆವಿಷ್ಟನಾಗಿ ಸಮಗ್ರ ದೇಹವನ್ನು ಧರಿಸಿಕೊಂಡಿರುವನು.[7]

---

1 'ಸ ಪ್ರತ್ಯಕ್ಷಃ । ಪ್ರತಿ ಹಿ ಸೋಽಕ್ಷೇಷ್ವಕ್ಷವಾನ್ ಸ ಭವತಿ ಹಿ ಯ ಏವಂ ವಿದ್ವಾನ್ ಪ್ರತ್ಯಕ್ಷಂ ವೇದ ।
—ಸಾಮವೇದೇ ವಾರುಣಶಾಖಾಯಾಮ್ (ಗೀ. ಭಾ. 9–2)

2 ಅಥಾಧ್ಯಾತ್ಮಮ್ ಯಃ ಪ್ರಾಣೇ ತಿಷ್ಠನ್....ಯೋ ವಾಚಿ ತಿಷ್ಠನ್........ ಯಶ್ಚಕ್ಷುಷಿ ತಿಷ್ಠನ್....ಯಃ ಶ್ರೋತ್ರೇ ತಿಷ್ಠನ್....ಯೋ ಮನಸಿ ತಿಷ್ಠನ್.... ಯಸ್ತ್ವಚಿ ತಿಷ್ಠನ್....ಅಂತರೋ ಯಮಯತಿ....' —ಬೃ.ಉ. 5–7–16....21

3 ಮನೋವಾಕ್‌ಪ್ರಾಣನಾಮಾಽಸೌ ಮನಆದಿಷು ಸಂಸ್ಥಿತಃ । ವಿಷ್ಣುಃ
—ಐ.ಉ.ಭಾ. 2-7-1-6

4 ....ಜಪೇತ್ । ಧ್ಯಾತ್ವಾ ನಾರಾಯಣಂ ದೇವಂ ಸ್ತ್ರೀರೂಪಂ ವಾಚಿ ಸಂಸ್ಥಿತಮ್ ।
—ಐ. ಉ. ಭಾ. 2-8-6-6

5 ಯಚ್ಚಕ್ಷುಷಿ ಸ್ಥಿತಂ ರೂಪಂ ವಿಷ್ಣೋಶ್ಚಕ್ಷುಸ್ತದುಚ್ಯತೇ ।
—ಬೃ. ಉ. ಭಾ. 6-1-5

6 ಯತ್‌ಸ್ಥಾನತ್ವಾದಿದಂ ಚಕ್ಷುರಸಂಗಂ ಸರ್ವವಸ್ತುಷು । ತಸ್ಮೈ ನಮೋ ಭಗವತೇ ವಾಮನಾಯ ಪರಾತ್ಮನೇ । —ಮಹಾಕೌರ್ಮ [ಛಾಂ.ಉ.ಭಾ. 4-3-3]

7 ಅನಾದ್ಯನಂತೋಽಪಿ ಹರಿರ್ವೈಕಾರಿಕಗಣೇಷ್ವಜಃ । ಅವತೀರ್ಣಃ ಪದಾಂಗುಷ್ಠ-ಮಧ್ಯಾಸ್ತೇ ವಿಶ್ವಭುಗ್ ವಿಭುಃ । ಪಾದದೇವಸ್ತು ಯಜ್ಞೋನ್ಯಽಸ್ತಂ ಪ್ರವಿಶ್ಯ ಹರಿಃ ಸ್ವಯಮ್ ಸರ್ವಂ ವಿಧಾರಯನ್ ದೇಹಂ ವರ್ತತೇ ಸರ್ವಶಕ್ತಿಧೃಕ್
—ವಹ್ನಿಪುರಾಣ [ಭಾಗ. ತಾ. ನಿ. 2-5-29]

ಶಾರ್ಕರಾಕ್ಷ್ಯರು ಹೊಟ್ಟೆಯಲ್ಲಿರುವ ಪರಮಾತ್ಮನನ್ನು 'ಉದರ'ನಾಮಕನನ್ನಾಗಿ ಉಪಾಸನೆ ಮಾಡುವರು.[1]

## ಮಜ್ಜಾದಿಗಳಲ್ಲಿ

ಕೌಂತರವ್ಯಮುನಿಯ ಉಪಾಸನೆಯ ಪ್ರಕಾರ ವಿಷ್ಣುನಾಮದ 'ಣು' ಎಂಬ ಊಷ್ಮವ್ಯತಿರಿಕ್ತಾಕ್ಷರದಲ್ಲಿ ಮುನ್ನೂರ ಅರವತ್ತು ಭಗವದ್ರೂಪಗಳೂ, 'ಷ್' ಎಂಬ ಊಷ್ಮಾಕ್ಷರದಲ್ಲಿ ಮುನ್ನೂರ ಅರವತ್ತು ಭಗವದ್ರೂಪಗಳೂ ಷ್‌ಣುಗಳ ಸಂಧಿಯಲ್ಲಿ ಮುನ್ನೂರ ಅರವತ್ತು ಭಗವದ್ರೂಪಗಳೂ—ಹೀಗೆ ಸಾವಿರದ ಎಂಭತ್ತು ರೂಪಗಳು ವಿಷ್ಣುನಾಮದಲ್ಲಿ ಹೇಗೋ ಹಾಗೆಯೇ ಇತರ ನಾಮಗಳಲ್ಲಿಯೂ ಇದ್ದು, ವಿಷ್ಣುವಿನ ಆ ರೂಪಗಳಲ್ಲಿ ಜೀವರ ದೇಹದಲ್ಲಿಯ ಮಜ್ಜೆಯಲ್ಲಿ [ಎಲುಬಿನೊಳಗಿನ ನೆಣ] ಮುನ್ನೂರ ಅರವತ್ತು ರೂಪಗಳೂ, ಎಲುಬಿನಲ್ಲಿ ಮುನ್ನೂರ ಅರವತ್ತು ರೂಪಗಳೂ, ಪರ್ವ ಎನಿಸುವ ಎಲುಬಿನ ಸಂಧಿಗಳಲ್ಲಿ ಮುನ್ನೂರ ಅರವತ್ತು ರೂಪಗಳೂ ಇವೆ. ಪರ್ವಗಳಲ್ಲಿರುವ ವಿಷ್ಣುವಿನ ರೂಪಗಳು ಉತ್ತಮ ಜ್ಞಾನವುಳ್ಳವುಗಳಾದುದರಿಂದ 'ಪರ್ವ' ಎಂದೂ, ಅಸ್ಥಿಗಳಲ್ಲಿರುವ ಭಗವದ್ರೂಪಗಳು ಸದಾ ಸಂಚರಿಸುತ್ತಿರುವುದರಿಂದ 'ಅಸ್ಥಿ' ಎಂದೂ, 'ಮಜ್ಜಾ'ದಲ್ಲಿರುವ ಭಗವದ್ರೂಪಗಳು ಆನಂದವನ್ನುಂಟು ಮಾಡುವುದರಿಂದ 'ಮಜ್ಜಾ' ಎಂದೂ ಎನಿಸಿವೆ.[2]

ಸ್ಥವಿರ ಶಾಕಲ್ಯರ ಉಪಾಸನೆಯ ಪ್ರಕಾರ ಭಗವಂತನು ಜೀವರ ದೇಹದ ಅಸ್ಥಿಗಳಲ್ಲಿ ಅಸ್ಥಿನಾಮಕನಾಗಿ, ಮಜ್ಜಾಗಳಲ್ಲಿ ಮಜ್ಜಾನಾಮಕನಾಗಿ ಇರುವಂತೆ ಪ್ರಮಾಣಗಳಾದ ವೇದಾದಿಗಳನ್ನು ಉಪದೇಶ ನೀಡಿ ಪ್ರಸಾರ ಮಾಡುವ ಪ್ರಯುಕ್ತ ಮಾಂಸನಾಮಕನಾಗಿ ಮಾಂಸದಲ್ಲೂ, ರಕ್ತವರ್ಣನಾಗಿರುವುದರಿಂದ 'ಲೋಹಿತ'

---

1 ....ಉದರಂ ಬ್ರಹ್ಮೇತಿ ಶಾರ್ಕರಾಕ್ಷ್ಯಾ ಉಪಾಸತೇ —ಐ. ಉ. 1-3-8

* ....ಶಾರ್ಕರಾಕ್ಷ್ಯಾಃ । ಉದರೇ ತೇ ಪರಂ ಬ್ರಹ್ಮ ವಾಸುದೇವಮುಪಾಸತೇ । —ಐ. ಉ. ಭಾ.

* ಉದರಮುಪಾಸತೇ ಯ ಋಷಿ ಸೂಕ್ಷ್ಮದೃಶಃ —ಭಾಗ. 10-94-18

2 ಸಂಧ್ಯೂಷ್ಮಾಕ್ಷರಗಾಣ್ಯಸ್ಯ ವಿಷ್ಣೋಃ ರೂಪಾಣಿ ಸರ್ವಶಃ ।
....ಸಾಶೀತಿಕಸಹಸ್ರಕಮ್ । ತಾನ್ಯೇವಾಸ್ಥಿಷು ಮಜ್ಜಾಸು ಪರ್ವಸ್ವಪಿ ಚ ಸರ್ವಶಃ ।
ಪರಜ್ಞಾನಾತ್ತು ಪರ್ವಾಣಿ ವಿಷ್ಣೋಃ ರೂಪಾಣಿ ತಾನಿ ಹಿ । ಅಸ್ಥಾನಾನ್ಮದ ನಾಚ್ಚೈವ
ಹ್ಯಸ್ಥಿಮಜ್ಜಾಭಿಧಾನಿ ಚ । —ಐ.ಉ ಭಾ. 2-8-2-4

ನಾಮಕನಾಗಿ ರಕ್ತದಲ್ಲೂ ಇರುವನು.[1]

ಮಹಿದಾಸನು ತನ್ನ ಶಿಷ್ಯರಿಗೆ ನೀಡಿದ ಉಪದೇಶದ ಪ್ರಕಾರ ಲೋಕದಲ್ಲಿ ಸ್ತ್ರೀಯರ ಶೋಣಿತದಲ್ಲಿ ಅಗ್ನ್ಯಂತರ್ಗತ ಸ್ತ್ರೀರೂಪಿ ಜನಾರ್ದನನಿದ್ದಾನೆ. ಅವನು ಜ್ವಲಿಸುವ ಜ್ವಾಲೆಯಂಥ ಪ್ರಭೆ ಉಳ್ಳವನು. ಅಗ್ನಿ ಎಂದು ಅವನ ಹೆಸರು. ಹೀಗೆ ವಿಷ್ಣುವಿನ ಸನ್ನಿಧಾನ ಇರುವುದರಿಂದ ಪತ್ನಿಯು ಶರೀರದಲ್ಲಿರುವ ಶೋಣಿತದ ವಿಷಯದಲ್ಲಿ ಪತಿಯು ಅಸಹ್ಯಪಟ್ಟುಕೊಳ್ಳಬಾರದು. ಹಾಗೆಯೇ ಲೋಕದಲ್ಲಿ ಪುರುಷರ ರೇತಸ್ಸಿನಲ್ಲಿ ಆದಿತ್ಯಾಂತರ್ಗತನಾದ ವಿಷ್ಣು ಇದ್ದಾನೆ. ಪ್ರಪಂಚಕ್ಕೆ ಆದಿ ಆಗಿರುವುದರಿಂದ ಆದಿತ್ಯ ಎನಿಸುವ, ಮಿಂಚಿನಂತೆ ಹೊಳೆಯುವ[2] ಅವನು ರೇತಸ್ಸಿನಲ್ಲಿರುವುದರಿಂದಲೇ ಪತಿಯು ರೇತಸ್ಸಿನ ಬಗ್ಗೆ ಪತ್ನಿಯು ಅಸಹ್ಯಪಡಬಾರದು.

## ನಾಡಿಗಳಲ್ಲಿ

ಜೀವರ ದೇಹದಲ್ಲಿ ಸಾವಿರಾರು ನಾಡಿಗಳಿದ್ದು ಅವುಗಳಲ್ಲೆಲ್ಲ ಭಗವದ್ರೂಪಗಳಿವೆ.

ನೆತ್ತಿಯವರೆಗೆ ಚಾಚಿಕೊಂಡಿರುವ ಸುಷುಮ್ನಾ ನಾಡಿಯಲ್ಲಿ[3] ನಾರಾಯಣರೂಪಿ ಪರಮಾತ್ಮನೂ, ಸುಷುಮ್ನಾ ನಾಡಿಯ ನಾಲ್ಕು ಬದಿಗಳಲ್ಲಿ ಇಡಾ, ಪಿಂಗಲಾ, ವಜ್ರಿಕಾ ಹಾಗೂ ಧಾರಿಣೀ ಎಂಬ ನಾಲ್ಕು ನಾಡಿಗಳಿದ್ದು ಅವುಗಳಲ್ಲಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಹಾಗೂ ಅನಿರುದ್ಧ ರೂಪಿ ಪರಮಾತ್ಮನು

---

1 ....ಹ್ಯಸ್ಥಿರಶ್ಚಾಸ್ಥಿನಾಮಕಃ । ಅಸ್ಥಿಸ್ಥಿತೋ ಹರಿಃ....ಮಜ್ಜಾಸು ಸ್ಥಃ ಸ ಮಜ್ಜಾಖ್ಯೋ ಮದಂ ಜನಯತೀತಿ ಹ । ....ಪ್ರಮಾಣಂ ಸಾರಯೇದ್ ಯಸ್ಮಾನ್ಮಾಂಸಾಖ್ಯೋ ಮಾಂಸಸಂಸ್ಥಿತಃ । ಲೋಹಿತಾಖ್ಯೋ ರಕ್ತವರ್ಣೋ ಲೋಹಿತಸ್ಥೋ ಜನಾರ್ದನಃ —ಐ. ಉ. ಭಾ 2-8-1-2

2 ....ಇತಿ ಪೃಷ್ಟಃ ಸ್ವಶಿಷ್ಯೈಃ ಸ ಮಹಿದಾಸೋಽವದದ್ಧರಿಃ ।
ಸ್ತ್ರೀಷು ಯಲ್ಲೋಹಿತಂ ಲೋಕೇ ತತ್ರಾಗ್ನಿಸ್ಥೋ ಜನಾರ್ದನಃ ।
ಸ್ತ್ರೀರೂಪಃ ಸೋಽಗ್ನಿನಾಮೈವ ಜ್ವಲಜ್ಜ್ವಾಲಾಸಮಪ್ರಭಃ ।
ತಸ್ಮಾದ್ ವಿಷ್ಣೋಃ ಸನ್ನಿಧಾನಾತ್ ಭರ್ತ್ರಾ ಭಾರ್ಯಾಶರೀರಗಾತ್ ।
ನ ಬೀಭತ್ಸೇತ್ಯೈವ ರಕ್ತಾತ್ ತಥಾ ಪುಂರೇತಸಿ ಸ್ಥಿತಃ ।
ಆದಿತ್ಯೇ ಸಂಸ್ಥಿತೋ ವಿಷ್ಣುರಾದೇರಾದಿತ್ಯನಾಮಕಃ ।
ತಸ್ಮಾನ್ನ ರೇತಸೋ ಭಾರ್ಯಾ ಬೀಭತ್ಸೇತ ಪತಿಸ್ಥಿತಾತ್ । ಪುಂರೂಪೋ
ಭಗವಾನ್ ವಿಷ್ಣುರೇತಸಿಸ್ಥೋ ದ್ಯುಮತ್ಪ್ರಭಃ । —ಐ.ಉ.ಭಾ. 2-2-6-14,15

3 ....ತಾಸಾಂ ಮೂರ್ಧಾನಮಭಿನಿಃಸೃತೈಕಾ —ಕಾ. ಉ. 2-3 11

ನೆಲೆಸಿರುವನು. [1]

ಸುಷುಮ್ನಾನಾಡಿಯ ಬಲಬದಿಯಲ್ಲಿ ಮೂವತ್ತಾರು ಸಾವಿರ ನಾಡಿಗಳಿದ್ದು ಅವುಗಳಲ್ಲಿ 'ಬೃಹತೀಸಹಸ್ರ'ದ 36 ಸಾವಿರ ಸ್ವರಾಕ್ಷರಗಳಿಂದ ಪ್ರತಿಪಾದ್ಯಗಳಾದ, ಪುರುಷಾಯುಷ್ಯವಾದ ನೂರುವರ್ಷಗಳ 36 ಸಾವಿರ ಹಗಲುಗಳನ್ನು ನಿಯಂತ್ರಿಸುವ, ಪುರುಷರೂಪದ 36 ಸಾವಿರ ಭಗವದ್ರೂಪಗಳಿವೆ.

ಸುಷುಮ್ನಾನಾಡಿಯ ಎಡಬದಿಯಲ್ಲಿ 36 ಸಾವಿರ ನಾಡಿಗಳಿದ್ದು ಅವುಗಳಲ್ಲಿ 'ಬೃಹತೀಸಹಸ್ರ'ದ 36 ಸಾವಿರ ವ್ಯಂಜನಾಕ್ಷರಗಳಿಂದ ಪ್ರತಿಪಾದ್ಯಗಳಾದ, ಪುರುಷಾಯುಷ್ಯವಾದ ನೂರುವರ್ಷಗಳ 36 ಸಾವಿರ ರಾತ್ರಿಗಳನ್ನು ನಿಯಂತ್ರಿಸುವ, ಸ್ತ್ರೀರೂಪದ 36 ಸಾವಿರ ಭಗವದ್ರೂಪಗಳಿವೆ.

ಹೀಗೆ ದೇಹದಲ್ಲಿರುವ 72 ಸಾವಿರ ನಾಡಿಗಳಲ್ಲಿ 72 ಸಾವಿರ ರೂಪಗಳಿಂದ ಭಗವಂತನಿರುವನು. [2]

**ಬೇರೆ ಬೇರೆ ಅವಸ್ಥೆಗಳಲ್ಲಿ :**

ವ್ಯಕ್ತಿ ಬೇರೆ ಬೇರೆ ಅವಸ್ಥೆಗೊಳಗಾದಾಗ ಆಯಾ ಅವಸ್ಥಾಪನ್ನ ವ್ಯಕ್ತಿಯ ನಾಮಕನಾಗಿ ಶ್ರೀಹರಿಯು ಅಲ್ಲಿರುವನು.

---

1 ಇಡಾ ಚ ಪಿಂಗಳಾ ಚೈವ ವಜ್ರಿಕಾ ಧಾರಿಣೀ ತಥಾ ।
ಸುಷುಮ್ನಾಯಾಶ್ಚತುರ್ದಿಕ್ಷು ವಜ್ರಿಕಾದ್ಯಾಸು ತತ್ರ ಚ । ಚತುರ್ಮೂರ್ತಿಃ ಸ ಭಗವಾನ್ ಹೃದಯೇ ಸಂವ್ಯವಸ್ಥಿತಃ —ತಂ. ಸಾ. ಸಂ. 4-152

2 ದ್ವಾಸಪ್ತತಿಸಹಸ್ರಾಣಿ ನಾಡ್ಯೋಽನ್ಯಾಸ್ತು ಪ್ರಧಾನತಃ ।
ಬೃಹತೀಸಹಸ್ರಸ್ಪರ್ಶಾನಾಮ್ಯುಷಾಂ ವಾಚ್ಯೋಽತ್ರ ಕೇಶವಃ
—ತಂ.ಸಾ.ಸಂ. 4-155

* ಷಟ್‌ತ್ರಿಂಶದ್ರೂಪವಾನ್ ವಿಷ್ಣುರ್ವ್ಯಂಜನೇಷು ಚ ಸಂಸ್ಥಿತಃ ।
ತಾನ್ಯೇವ ವಿಷ್ಣುರೂಪಾಣಿ ರಾತ್ರೀಣಾಮಪಿ ದೇವತಾಃ ।
ಏಕೈಕಂ ಚ ಸಹಸ್ರಂ ತದ್ ವ್ಯಂಜನೇಷು ಚ ರಾತ್ರಿಷು ।
ರೂಪಂ ವಿಷ್ಣೋಃ ಸ್ಥಿತಂ ವ್ಯೂಹ್ಯ ಷಟ್‌ತ್ರಿಂಶತಿಸಹಸ್ರಧಾ ।
ಷಟ್‌ತ್ರಿಂಶತಿಸಹಸ್ರಾಣಿ ಸ್ವರಗಾನಿ ಹರೇರಪಿ ।
ತಾನ್ಯೇವಾಹ್ನಾಂ ದೈವತಾನಿ ರೂಪಾಣಿ ಪರಮಾತ್ಮನಃ ।
ದ್ವಾಸಪ್ತತಿಸಹಸ್ರಾಣಿ ರೂಪೇಣ್ಯೇವಂ ರಮಾಪತೇಃ ।
ಶತಾಬ್ದಾನಾಮಹೋರಾತ್ರದೈವತಾನ್ಯುತ್ತಮಾನಿ ಚ ।
—ಐತರೇಯ ಸಂಹಿತಾ [ಐ. ಉ. ಭಾ. 2-1-3-2]

ವ್ಯಕ್ತಿ 'ಪಿತೃ' ಎನಿಸಿದಾಗ ಪಾಲಕನಾಗಿರುವುದರಿಂದ ಪಿತೃನಾಮಕನಾಗಿ ಭಗವಂತನು ಅವನಲ್ಲಿರುವನು; 'ಮಾತೃ' ಎನಿಸಿದಾಗ ಮಾನ್ಯನಾಗಿರುವುದರಿಂದ ಮಾತೃನಾಮಕನಾಗಿ ಭಗವಂತನು ಅವಳಲ್ಲಿರುವನು. 'ಪುತ್ರ' ಎನಿಸಿದಾಗ ದುರ್ಗಂಧವುಳ್ಳ ನರಕದಿಂದ ಸಂರಕ್ಷಕನಾಗಿರುವುದರಿಂದ ಪುತ್ರನಾಮಕನಾಗಿ ಅವನಲ್ಲಿ ರುವನು. [1] ಹೆಂಡತಿಯಾಗಿ 'ಜಾಯಾ' ಎನಿಸಿದಾಗ, ಜನ್ಮಕೊಡುವವನಾಗಿರು ವುದರಿಂದ ಜಾಯಾನಾಮಕನಾಗಿ ಭಗವಂತನು ಪತ್ನಿಯಲ್ಲಿರುವನು; 'ಪತಿ' ಎನಿಸಿ ದಾಗ ಕಾಪಾಡುವುದರಿಂದ ಪತಿನಾಮಕನಾಗಿ ಭಗವಂತನು ಪತಿಯಲ್ಲಿರುವನು. [2]

ವ್ಯಕ್ತಿಗಳು ದಂಪತಿಗಳೆನಿಸಿದಾಗ ಅವರಲ್ಲಿ ಭಗವಂತನು ವಿಶೇಷ ರೂಪದಿಂದ ನೆಲೆಸುವನು. [3]

ಪತಿಪತ್ನಿಯರು ಸಮಾಗಮದಲ್ಲಿ ತೊಡಗಿದಾಗ ಪ್ರದ್ಯುಮ್ನರೂಪಿ ಭಗವಂತನು ಪುರುಷನಾಮಕನಾಗಿ ಪ್ರದ್ಯುಮ್ನನಾರಾಯಣ ಎಂಬ ರೂಪದಿಂದ ಪುರುಷನ ವಾಗಿಂದ್ರಿಯದಲ್ಲಿದ್ದು ವಾಕ್ ಎನಿಸಿ ಪುರುಷಾಗ್ನಿಯ ಸಮಿಧೆ ಎನಿಸುವನು. ಪ್ರದ್ಯುಮ್ನವಾಸುದೇವ ರೂಪದಿಂದ ಪುರುಷನ ಪ್ರಾಣದಲ್ಲಿದ್ದು ಪ್ರಾಣ ಎಂದೆನಿಸಿ ಪುರುಷಾಗ್ನಿಯ ಧೂಮ ಎನಿಸುವನು. ಪ್ರದ್ಯುಮ್ನಸಂಕರ್ಷಣ ರೂಪದಿಂದ ಪುರುಷನ ನಾಲಗೆಯಲ್ಲಿದ್ದು ಜಿಹ್ವಾ ಎಂದೆನಿಸಿ ಪುರುಷಾಗ್ನಿಯ ಕಿರಣವೆನಿಸುವನು. ಪ್ರದ್ಯುಮ್ನಪ್ರದ್ಯುಮ್ನ ರೂಪದಿಂದ ಪುರುಷನ ಚಕ್ಷುರಿಂದ್ರಿಯದಲ್ಲಿದ್ದು 'ಚಕ್ಷುಃ' ಎಂದೆನಿಸಿ ಪುರುಷಾಗ್ನಿಯ ಕೆಂಡ ಎನಿಸುವನು. ಪ್ರದ್ಯುಮ್ನಅನಿರುದ್ಧ ರೂಪದಿಂದ ಪುರುಷನ ಶ್ರೋತ್ರದಲ್ಲಿದ್ದು 'ಶ್ರೋತ್ರ' ಎಂದೆನಿಸಿ ಪುರುಷಾಗ್ನಿಯ ಕಿಡಿಗಳೆನಿಸಿರು ವನು. [4]

---

1 ಸ ಏವ ಪಿತೃಸಂಸ್ಥಸ್ತು ಪಾತೃತ್ವಾತ್ ಪಿತೃನಾಮಕಃ ।
....ಮಾತೃಸ್ಥೋ ಮಾತೃನಾಮಕಃ । ಮಾನನಾತ್....ಸ ಏವ ಪುತ್ರಸಂಸ್ಥಶ್ಚ ಪುತ್ರನಾಮಾ ಜನಾರ್ದನಃ । ತ್ರಾಣಾತ್ ಪೂತಿತ ಏವಾಸೌ....
—ಐ. ಉ. ಭಾ. 2-7-6-11

2 ಜಾಯಾ ಪೂರ್ವರೂಪಂ ಪತಿರುತ್ತರರೂಪಂ.... —ಐ.ಉ. 2-7-6-9

3 ದಂಪತ್ಯೋರ್ಭಗವಾನ್ ವಿಷ್ಣುಃ.... —ಪ್ರಜಾಪತಿಸಂಹಿತಾ [ಷಟ್ 1-3-3]

4 ಪುರುಷೋ ವಾವ ಗೌತಮಾಗ್ನಿಸ್ತಸ್ಯ ವಾಗೇವ ಸಮಿತ್ ಪ್ರಾಣೋ ಧೂಮೋ ಜಿಹ್ವಾರ್ಚಿಶ್ಚಕ್ಷುರಂಗಾರಾಃ ಶ್ರೋತ್ರಂ ವಿಸ್ಫುಲಿಂಗಾಃ.... —ಛಾಂ.ಉ. 5-2-9

* ನಾರಾಯಣಾದಯಃ ಪಂಚ ಕ್ರಮಾತ್ ಪಂಚಾಗ್ನಯಃ ಸ್ಮೃತಾಃ....
ಪುನರ್ನಾರಾಯಣಾದ್ಯಾತ್ಮಾ ಪ್ರತ್ಯೇಕಂ ಪಂಚರೂಪವಾನ್....ವಚನಾದ್ ವಾಕ್ ತಥಾ ಪ್ರಾಣ ಸ್ತ್ವನನಾಚ್ಚಕ್ಷುರುಚ್ಯತೇ । ದರ್ಶನಾಚ್ಛ್ರವಣಾಚ್ಛ್ರೋತ್ರಂ ಜಿಹ್ವಾ ವೈ ಹೋಮತಃ ಸ್ಮೃತಃ । ....ಪುರುಷಃ ಪುರು ಯಸ್ಮಾತ್ ಸಃ...." ।
—ಸಾಮಸಂಹಿತಾ (ಛಾಂ. ಉ. ಭಾ. 5-2-9)

ಅನಿರುದ್ಧರೂಪಿ ಭಗವಂತನು ಯೋಷಾನಾಮಕನಾಗಿ ಅನಿರುದ್ಧನಾರಾಯಣ ಎಂಬ ರೂಪದಿಂದ ಸ್ತ್ರೀಯ ಉಪಸ್ಥದಲ್ಲಿದ್ದು ಉಪಸ್ಥನಾಮಕನಾಗಿ ಯೋಷಿದಗ್ನಿಯ ಸಮಿಧೆ ಎನಿಸುವನು. ಅನಿರುದ್ಧವಾಸುದೇವ ಎಂಬ ರೂಪದಿಂದ ಸಂಭೋಗಕ್ಕಾಗಿ ಸ್ತ್ರೀ ಪುರುಷರಲ್ಲಿ ನಡೆಯುವ ಸಂಭಾಷಣೆಯಲ್ಲಿದ್ದು ಉಪಮಂತ್ರಣನಾಮಕನಾಗಿ ಯೋಷಿದಗ್ನಿಯ ಹೊಗೆ ಎನಿಸುವನು. ಅನಿರುದ್ಧಸಂಕರ್ಷಣ ರೂಪದಿಂದ ಸ್ತ್ರೀಯ ಯೋನಿಯಲ್ಲಿದ್ದು ಯೋನಿನಾಮಕನಾಗಿ ಯೋಷಿದಗ್ನಿಯ ಕಿರಣ ಎನಿಸುವನು. ಅನಿರುದ್ಧಪ್ರದ್ಯುಮ್ನ ರೂಪದಿಂದ ಸ್ತ್ರೀಯ ಯೋನಿಯ ಒಳಗೆ ನಡೆಯುವ ಸುರತವ್ಯಾಪಾರದಲ್ಲಿದ್ದು ಅಂತಃಕರಣನಾಮಕನಾಗಿ ಯೋಷಿದಗ್ನಿಯ ಕೆಂಡ ಎನಿಸುವನು. ಅನಿರುದ್ಧ ಅನಿರುದ್ಧ ರೂಪದಿಂದ ಸುರತದಿಂದ ಉಂಟಾಗುವ ಸಂತೋಷದಲ್ಲಿದ್ದು ಅಭಿನಂದನಾಮಕನಾಗಿ ಯೋಷಿದಗ್ನಿಯ ಕಿಡಿಗಳೆನಿಸಿರುವನು. [1]

ವ್ಯಕ್ತಿಗಳು ಅನ್ನಾದಿಗಳ ಭೋಜನದಲ್ಲಿ ತೊಡಗಿದಾಗ ಭೋಗಿಸುವ ವ್ಯಕ್ತಿಯಲ್ಲಿ ಭಗವಂತನು ಸಂಕರ್ಷಣ ಮತ್ತು ಪ್ರದ್ಯುಮ್ನ ರೂಪಗಳಿಂದ ಇದ್ದು ಭೋಗಿಸುವವನಿಗೆ ಭೋಗಿಸುವ ಸಾಮರ್ಥ್ಯವನ್ನು ಅನುಗ್ರಹಿಸುವನು. ವಾಹನ, ಪಾದರಕ್ಷೆ ಮುಂತಾದವುಗಳ ಉಪಯೋಗದ ಸಂದರ್ಭದಲ್ಲಿ ಅವುಗಳನ್ನು ಉಪಯೋಗಿಸುವವರಲ್ಲಿ ಭಗವಂತನು ಸಂಕರ್ಷಣ ಮತ್ತು ಪ್ರದ್ಯುಮ್ನ ರೂಪಗಳಿಂದ ಇರುವನು. [2]

ವ್ಯಕ್ತಿ ಗರ್ಭಿಣಿಯಾಗಿರುವಾಗ ಭಗವಂತನು ತನ್ನ ವಾಸುದೇವ ರೂಪದಿಂದ 'ಯೋನಿಶುದ್ಧಿ'ಯನ್ನು ನಡೆಸಿದರೆ, ಗರ್ಭದಲ್ಲಿ ಜೀವನ ಶರೀರದ ನಿರ್ಮಾಣವನ್ನು ಸಂಕರ್ಷಣರೂಪದಿಂದ ನಡೆಸುವನು. ಗರ್ಭದಿಂದ ಹೊರಹೊಮ್ಮುವುದನ್ನು ಪ್ರದ್ಯುಮ್ನ ರೂಪದಿಂದ ನಡೆದರೆ, ಗರ್ಭದ ಧಾರಣೆ ಪೋಷಣೆಗಳು ಅನಿರುದ್ಧರೂಪದಿಂದ ನಡೆಯುವುದು. ಹೀಗೆ ಗರ್ಭಿಣಿಯಲ್ಲಿ ಭಗವಂತನ ವಾಸುದೇವಾದಿ ರೂಪಗಳು

---

1 ಯೋಷಾ ವಾವ ಗೌತಮಾಗ್ನಿಸ್ತಸ್ಯಾ ಉಪಸ್ಥ ಏವ ಸಮಿದ್ ಯದುಪಮಂತ್ರಯತೇ ಸ ಧೂಮೋ ಯೋನಿರರ್ಚಿರ್ಯದಂತಃ ಕರೋತಿ ತೇಽಙ್ಗಾರಾ ಅಭಿನಂದಾ ವಿಸ್ಫುಲಿಂಗಾಃ.... —ಛಾಂ. ಉ. 5-2-10

* ಉಪಸ್ಥಿತೇರುಪಸ್ಥಃ ಸ ಉಪಮಂತ್ರಕೃದೇವ ಸಃ । ಯೋನಿರ್ಯೋನಿಕೃದ್ಯಸ್ಮಾತ್ ಸ ಸ ಚಾಂತಃಕೃಚ್ಚ ನಂದನಃ ।....ಸ ಯೋಷಾ ಜೋಷ್ಯೋಯತೋಽಖಿಲೈಃ —ಸಾಮಸಂಹಿತಾ [ಛಾಂ. ಉ. ಭಾ]

2 ಸಂಕರ್ಷಣಶ್ಚ ಪ್ರದ್ಯುಮ್ನಸ್ತತ್ರ ಭೋಕ್ತೃಷು ಸಂಸ್ಥಿತೌ । ಭೋಕ್ತೃಶಕ್ತಿಪ್ರದಾತಾರೌ....ವಾಹನೋಪಾನಹಾದೀನಾಮಾರೋಢಾರೋ ನರಾದಯಃ ।
ಯಃ ಸಂಕರ್ಷಣಶ್ಚೈವ ಪ್ರದ್ಯುಮ್ನಸ್ತೇಷು ಸಂಸ್ಥಿತೌ....
—ಐತರೇಯ ಸಂಹಿತಾ [ಐ. ಉ. ಭಾ. 2-2-1-5]

ವಿಶೇಷವಾಗಿ ನೆಲೆಸಿರುವವು.[1]

## ಮೂರು ಬಗೆಯ ರಕ್ಷಣೆ:

ಈ ರೀತಿಯಾಗಿ ಭಗವಂತನು ತನ್ನ ಬೇರೆ ಬೇರೆ ರೂಪಗಳಿಂದ ಜೀವರ ಸ್ವರೂಪದಲ್ಲಿ, ದೇಹದಲ್ಲಿ, ದೇಹದ ಬೇರೆ ಬೇರೆ ಘಟಕಗಳಲ್ಲಿ, ಬೇರೆ ಬೇರೆ ಅವಸ್ಥೆಗೊಳಗಾಗುವ ಜೀವರಲ್ಲಿ—ಇದ್ದುಕೊಂಡು ಅವರಿಗೆ ರಕ್ಷಣೆಯನ್ನು ನೀಡುತ್ತಿರುವನು. ಅವನು ಅನುಗ್ರಹಿಸುವ ರಕ್ಷಣೆ ಮೂರು ಬಗೆಯದು.

೧ ಜೀವರ ಸ್ವರೂಪ, ದೇಹ, ಅವಯವಾದಿಗಳು ಯಾವುದೇ ಘಾತುಕ ಪದಾರ್ಥದ ಅಥವಾ ಘಟನೆಯ ಆಕ್ರಮಣಕ್ಕೆ ಬಲಿಯಾಗಿ ನಾಶವಾಗದಂತೆ ನೀಡುವ ರಕ್ಷಣೆ.

೨ ಆಯಾ ವಸ್ತು ತನ್ನ ತನ್ನ ಚಟುವಟಿಕೆಯನ್ನು ಚೆನ್ನಾಗಿ ನಿರ್ವಹಿಸುವಂತೆ ಹಾಗೂ ತನ್ನ ತನ್ನ ಗುಣ, ಧರ್ಮ, ಸ್ವಭಾವಗಳನ್ನು ಚೆನ್ನಾಗಿ ಅಭಿವ್ಯಕ್ತಗೊಳಿಸುವಂತೆ ನಿಯಂತ್ರಿಸುವ ಮೂಲಕ ರಕ್ಷಣೆ.

೩ ದೇಹ, ಇಂದ್ರಿಯ, ಅವಯವಾದಿಗಳು ಒಳ್ಳೆಯ ಪ್ರವೃತ್ತಿಯನ್ನು ಬಿಟ್ಟು ಕೆಟ್ಟ ಪ್ರವೃತ್ತಿಯಲ್ಲಿ ತೊಡಗದಂತೆ ನಿಯಮಿಸುವ ಮೂಲಕ ರಕ್ಷಣೆ.

ಈ ಮೂರೂ ಬಗೆಯ ರಕ್ಷಣೆಯನ್ನು ಭಗವಂತನಿಗೆ ವೈಕುಂಠಾದಿಗಳಲ್ಲಿ ಇದ್ದುಕೊಂಡೇ, ತನ್ನ ಮೂಲರೂಪದಿಂದಲೇ ನಡೆಸಬಹುದಾದರೂ, ತನ್ನ ಮೂಲಕ ಸಲ್ಲುವ ಉಪಕಾರವನ್ನು ಜೀವರು ಅನುಸಂಧಾನ ಮಾಡಿಕೊಳ್ಳಲು ಅನುಕೂಲವಾಗಲೆಂಬ ಉದ್ದೇಶದಿಂದ[2] ಭಗವಂತನು ತನ್ನ ಬೇರೆ ಬೇರೆ ರೂಪಗಳಿಂದ ಜೀವರ ದೇಹಾದಿಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿಯೇ ಇದ್ದುಕೊಂಡು ಜೀವರ ರಕ್ಷಣೆಯನ್ನು ನಡೆಸುತ್ತಿರುವನು.

ಈ ರೂಪಗಳನ್ನೇ ಕವಚಸ್ತೋತ್ರಗಳಲ್ಲಿ ದೇಹಾದಿಗಳ ರಕ್ಷಣೆಗಾಗಿ ಉಲ್ಲೇಖಿಸುವ ಬೇರೆ ಬೇರೆ ಭಗವನ್ನಾಮಗಳಿಂದ ಪರಾಮರ್ಶೆ ಮಾಡಿ ಸ್ತುತಿಸಬೇಕು.

---

1 ಯೋನಿಕ್ಲೃಪ್ತಿರ್ವಾಸುದೇವಾತ್ ರೂಪಂ ಸಂಕರ್ಷಣಾತ್ ಭವೇತ್ ।
ಅನೇಕಕರ್ಮ ಪ್ರದ್ಯುಮ್ನಾದ್ ಅನಿರುದ್ಧಾಚ್ಚ ಧಾರಣಮ್
—ಛಾಂ. ಉ. ಭಾ 2-1-9

2 ಅಗಣಯ್ಯ ಸದ್ಗುಣಗಣೋ ವಿದೂಷಣಃ ಸ್ವವಶಾಖಿಲೋಽಪ್ಯನುಪಚಾರತಃ ಸ್ವಯಮ್ । ಸ್ಮೃತಿಕೀರ್ತನಪ್ರಣತಿಭಿರ್ವಿಮುಕ್ತಯೇ ಸ್ವಜನಸ್ಯ ಯಾತ್ಯಯಮನೇಕರೂಪತಾಮ್—ಎಂಬುದಾಗಿ ಶ್ರೀನಾರಾಯಣ ಪಂಡಿತರು [ಸು. ವಿ. 8-13] ಭಗವಂತನ ಬೇರೆ ಬೇರೆ ಅವತಾರಗಳ ಸ್ವೀಕಾರದ ಅವಶ್ಯಕತೆಯನ್ನು ಪ್ರತಿಪಾದಿಸಿರುವುದನ್ನು ಇಲ್ಲಿಗೂ ಅನ್ವಯಿಸಿಕೊಳ್ಳಬಹುದು.

## ಜೀವಾತ್ಮನ ಸ್ವರೂಪಾದಿಗಳಲ್ಲಿರುವ

# ಭಗವದ್ರೂಪಗಳ ಸಂಗ್ರಹ

| ಇರುವ ಸ್ಥಳ | ಇರುವ ಭಗವದ್ರೂಪ |
|---|---|
| ಜೀವಾತ್ಮನ ಸ್ವರೂಪದಲ್ಲಿ | 'ಕ್ಷೇತ್ರಜ್ಞ' 'ಹೃದಯಂ' 'ಜೀವ' 'ಆತ್ಮಾ' 'ಪ್ರತ್ಯಗಾತ್ಮಾ' ಮುಂತಾದ ಹೆಸರುಗಳೂ ಇವೆ. |
| ಜೀವಾತ್ಮನ ಸಮಗ್ರ ದೇಹದಲ್ಲಿ | 'ಅಧಿಯಜ್ಞ' 'ಪುರುಷ' ಎಂಬ ಹೆಸರೂ ಇದೆ. |
| ದೇಹದ ಹೃದಯದಲ್ಲಿ | 'ಪುರುಷ' ಹೃದಯ, ಅನಿರುದ್ಧ, ಜೀವಕಲಾ, ಪ್ರಾಜ್ಞ, ಆತ್ಮಾ, ಅಂತರಾತ್ಮಾ, ಪ್ರಾದೇಶ |
| ಹೃದಯದ ಬುಡದಲ್ಲಿ | 'ಮೂಲೇಶ' |
| ಮಸ್ತಕದಲ್ಲಿ ಹಾಗೂ ತಲೆಯಿಂದ 12 ಅಡಿಮೇಲಿನ ಭಾಗದಲ್ಲಿ | 'ವಾಸುದೇವ' |
| ನೆತ್ತಿಯಲ್ಲಿ | ಪಕ್ಷಿರೂಪದ 'ಸಂಕರ್ಷಣ' |
| ಬಲಗಣ್ಣಿನ ತುದಿಯಲ್ಲಿ | 'ವಿಶ್ವ' |
| ಕಿರು ನಾಲಗೆಯಲ್ಲಿ | 'ಪ್ರದ್ಯುಮ್ನ' |
| ಕಂಠ | 'ತೈಜಸ' 'ಅಂತರಾತ್ಮಾ' ಎಂಬ ಹೆಸರೂ ಇದೆ. |
| ಸಹಸ್ರಾರದಲ್ಲಿ [ನೆತ್ತಿಯ ಮೇಲಿರುವ ನಾಡೀಚಕ್ರ] | ವಾಸುದೇವ, ಧನ್ವಂತರಿ |
| ಆಜ್ಞಾಚಕ್ರದಲ್ಲಿ [ಭ್ರೂಮಧ್ಯದಲ್ಲಿರುವ ನಾಡೀಚಕ್ರ] | ಸಂಕರ್ಷಣ, ಧನ್ವಂತರಿ |
| ವಿಶುದ್ಧಿ ಚಕ್ರದಲ್ಲಿ [ಕಂಠದಲ್ಲಿರುವ ನಾಡೀಚಕ್ರ] | ಪ್ರದ್ಯುಮ್ನ ಧನ್ವಂತರಿ |
| ಅನಾಹತ ಚಕ್ರದಲ್ಲಿ [ಹೃದಯದ ಕೋಶದಲ್ಲಿರುವ ನಾಡೀಚಕ್ರ] | ಅನಿರುದ್ಧ, ಧನ್ವಂತರಿ |

| | |
|---|---|
| ಮಣಿಪೂರದಲ್ಲಿ [ನಾಭಿಯಲ್ಲಿರುವ ನಾಡೀಚಕ್ರ] | ನಾರಾಯಣ [?] [1] ಧನ್ವಂತರಿ |
| ಮೂಲಾಧಾರದಲ್ಲಿ [ಜನನೇಂದ್ರಿಯದ ಮೂಲದಲ್ಲಿರುವ ನಾಡೀಚಕ್ರ] | ನಾರಾಯಣ (?) ವಾಸುದೇವಾದಿ ಪಂಚ ಭಗವನ್ಮೂರ್ತಿಗಳು. [2] |
| ಅನ್ನಮಯಕೋಶದಲ್ಲಿ | ಅನಿರುದ್ಧ [ಅನ್ನಮಯ] ಧನ್ವಂತರಿ |
| ಪ್ರಾಣಮಯಕೋಶದಲ್ಲಿ | ಪ್ರದ್ಯುಮ್ನ [ಪ್ರಾಣಮಯ] |
| ಮನೋಮಯ ಕೋಶದಲ್ಲಿ | ಸಂಕರ್ಷಣ [ಮನೋಮಯ] |
| ವಿಜ್ಞಾನಮಯ ಕೋಶದಲ್ಲಿ | ವಾಸುದೇವ [ವಿಜ್ಞಾನಮಯ] |
| ಆನಂದಮಯ ಕೋಶದಲ್ಲಿ | ನಾರಾಯಣ [ಆನಂದಮಯ] |
| ಪ್ರಾಣವಾಯುವಿನಲ್ಲಿ | ನಾರಾಯಣ |
| ವ್ಯಾನ ವಾಯುವಿನಲ್ಲಿ | ವಾಸುದೇವ |
| ಅಪಾನವಾಯುವಿನಲ್ಲಿ | ಸಂಕರ್ಷಣ |
| ಉದಾನವಾಯುವಿನಲ್ಲಿ | ಪ್ರದ್ಯುಮ್ನ |
| ಸಮಾನವಾಯುವಿನಲ್ಲಿ | ಅನಿರುದ್ಧ |
| ಇಂದ್ರಿಯಗಳಲ್ಲಿ [ಸಮಷ್ಟಿಯಾಗಿ] | ಪ್ರತ್ಯಕ್ಷ |
| ಮನಸ್ಸಿನಲ್ಲಿ | ಮನಃ |
| ವಾಗಿಂದ್ರಿಯದಲ್ಲಿ | ಪ್ರದ್ಯುಮ್ನ, ವಾಕ್ |
| ಚಕ್ಷುರಿಂದ್ರಿಯದಲ್ಲಿ | 'ನಾರಾಯಣ' 'ಚಕ್ಷುಷ್' 'ವಾಮನ' |
| ಶ್ರೋತ್ರೇಂದ್ರಿಯದಲ್ಲಿ | ವಾಸುದೇವ, ಶ್ರೋತ್ರ |
| ಘ್ರಾಣೇಂದ್ರಿಯದಲ್ಲಿ | ಪ್ರಾಣ |

---

1 ವೃಷಣ ಮೂಲದಲ್ಲಿ ಮತ್ತು ನಾಭಿಯಲ್ಲಿ ನಾರಾಯಣ ರೂಪವನ್ನು ಧ್ಯಾನಿಸಬೇಕೆಂದು ಆಚಾರ್ಯರ ಆಶಯವಿದ್ದಿರಬಹುದೇನೋ? ಈ ಅಭಿಪ್ರಾಯವನ್ನೇ ಪ್ರತಿಬಿಂಬಿಸುವ ಒಂದು ಮಾತು ಫಲಾರೀಯದಲ್ಲಿ ಬಂದಿದೆ. .... "ತತ್ರೈಕಂ ರೂಪಂ ಸ್ಥಾನದ್ವಯೇ ಧ್ಯೇಯಮಿತ್ಯಾಹುಃ ।
—ಬನ್ನಂಜೆ [ತಂ. ಸಾ. ಸಂ. ಟಿಪ್ಪಣಿ]

2 ಅಥವಾ ವೃಷಣ ಮೂಲದಲ್ಲಿ ಪಂಚ ಮೂರ್ತಿಗಳನ್ನು ಧ್ಯಾನಿಸಿ ಉಳಿದ ಐದು ಸ್ಥಾನಗಳಲ್ಲಿ ಕ್ರಮವಾಗಿ ನಾರಾಯಣಾದಿ ರೂಪಗಳನ್ನು ಧ್ಯಾನಿಸಬೇಕು ಎನ್ನುವ ಪಕ್ಷವೂ ಸಾಧುವಾಗಬಹುದು.
—ಬನ್ನಂಜೆ [ತಂ. ಸಾ. ಸ. ಟಿಪ್ಪಣಿ]

| | |
|---|---|
| ತ್ವಗಿಂದ್ರಿಯದಲ್ಲಿ | ಅನಿರುದ್ಧ |
| ಪಾದದ ಅಂಗುಷ್ಠದಲ್ಲಿ | ಯಜ್ಞ |
| ಉದರದಲ್ಲಿ | ಉದರ |
| ಚರ್ಮದಲ್ಲಿ | ನಾರಾಯಣ |
| ಮಾಂಸದಲ್ಲಿ | 'ಮಾಂಸ' ವಾಸುದೇವ |
| ರಕ್ತದಲ್ಲಿ | ಲೋಹಿತ |
| ಸ್ನಾವಾದಲ್ಲಿ | ಸಂಕರ್ಷಣ |
| ಎಲುಬಿನಲ್ಲಿ | 'ಅಸ್ಥಿ' 'ಪ್ರದ್ಯುಮ್ನ' 'ವಿಷ್ಣುನಾಮದ 'ಣು' ಎಂಬ ಅಕ್ಷರದಲ್ಲಿರುವ 360 ಭಗವದ್ರೂಪಗಳು. |
| ಮಜ್ಜೆಯಲ್ಲಿ | 'ಮಜ್ಜಾ' 'ಅನಿರುದ್ಧ' 'ವಿಷ್ಣುನಾಮದ 'ಷ್' ಅಕ್ಷರದಲ್ಲಿರುವ 360 ಭಗವದ್ರೂಪ ಗಳು.' |
| ಪರ್ವಗಳಲ್ಲಿ | 'ಪರ್ವ' ವಿಷ್ಣುನಾಮದ 'ಷ್' ಮತ್ತು 'ಣು'ಗಳ ಸಂಧಿಯಲ್ಲಿರುವ 360 ಭಗವದ್ರೂಪಗಳು. |
| ದೇಹದ ಅಗ್ನಿಯಲ್ಲಿ | ಜ್ಯೋತಿರ್ನಾಮಕ ಪ್ರದ್ಯುಮ್ನ |
| ಕಿವಿ, ಮೂಗು ಇತ್ಯಾದಿಗಳ ಒಳಗಿನ ಅವಕಾಶ ರೂಪದ ಆಕಾಶದಲ್ಲಿ | ವಾಸುದೇವ |
| ರಕ್ತಾದಿ ರೂಪದ ಜಲದಲ್ಲಿ | ಅಪ್‌ನಾಮಕ ಅನಿರುದ್ಧ |
| ಎಲುಬು ಮುಂತಾದ ಪೃಥಿವಿಯಲ್ಲಿ | ಪೃಥಿವಿನಾಮಕ ನಾರಾಯಣ |
| ಪುರುಷರ ರೇತಸ್ಸಿನಲ್ಲಿ | ಆದಿತ್ಯನಾಮಕ ಭಗವಂತ |
| ಸ್ತ್ರೀಯರ ಶೋಣಿತದಲ್ಲಿ | ಅಗ್ನಿನಾಮಕ ಭಗವಂತ |
| ಸುಷುಮ್ನಾ ನಾಡಿಯಲ್ಲಿ | ನಾರಾಯಣ |
| ಇಡಾನಾಡಿಯಲ್ಲಿ | ಅನಿರುದ್ಧ |
| ಪಿಂಗಲಾನಾಡಿಯಲ್ಲಿ | ಸಂಕರ್ಷಣ |
| ವಜ್ರಿಕಾನಾಡಿಯಲ್ಲಿ | ಪ್ರದ್ಯುಮ್ನ |

| | |
|---|---|
| ಧಾರಿಣಿ ನಾಡಿಯಲ್ಲಿ | ವಾಸುದೇವ |
| ಸುಷುಮ್ನಾ ನಾಡಿಯ ಬಲಬದಿಯ 36 ಸಾವಿರ ನಾಡಿಗಳಲ್ಲಿ | 'ಬೃಹತೀಸಹಸ್ರ'ದ 36 ಸಾವಿರ ಸ್ವರಾಕ್ಷರ ಪ್ರತಿಪಾದ್ಯಗಳಾದ ಪುರುಷ ರೂಪದ 36 ಸಾವಿರ ಭಗವದ್ರೂಪಗಳು |
| ಸುಷುಮ್ನಾ ನಾಡಿಯ ಎಡಬದಿಯ 36 ಸಾವಿರ ನಾಡಿಗಳಲ್ಲಿ | 'ಬೃಹತೀಸಹಸ್ರ'ದ 36 ಸಾವಿರ ವ್ಯಂಜನಾಕ್ಷರ ಪ್ರತಿಪಾದ್ಯಗಳಾದ ಸ್ತ್ರೀ ರೂಪದ 36 ಸಾವಿರ ಭಗವದ್ರೂಪಗಳು |
| ಪತ್ನಿಯ ಸಮಾಗಮದಲ್ಲಿ ತೊಡಗಿದ ಪತಿಯಲ್ಲಿ | 'ಪ್ರದ್ಯುಮ್ನ' ಪುರುಷ |
| ಅಂತಹ ಪತಿಯ ವಾಗಿಂದ್ರಿಯದಲ್ಲಿ | ಪ್ರದ್ಯುಮ್ನನಾರಾಯಣ 'ವಾಕ್' |
| ,, ಪ್ರಾಣದಲ್ಲಿ | ಪ್ರದ್ಯುಮ್ನವಾಸುದೇವ 'ಪ್ರಾಣ' |
| ,, ನಾಲಗೆಯಲ್ಲಿ | ಪ್ರದ್ಯುಮ್ನಸಂಕರ್ಷಣ 'ಜಿಹ್ವಾ' |
| ,, ಚಕ್ಷುರಿಂದ್ರಿಯದಲ್ಲಿ | ಪ್ರದ್ಯುಮ್ನಪ್ರದ್ಯುಮ್ನ 'ಚಕ್ಷುಃ' |
| ,, ಶ್ರೋತ್ರೇಂದ್ರಿಯದಲ್ಲಿ | ಪ್ರದ್ಯುಮ್ನಾನಿರುದ್ಧ 'ಶ್ರೋತ್ರ' |
| ಪತಿಯ ಸಮಾಗಮದಲ್ಲಿ ತೊಡಗಿದ ಪತ್ನಿಯಲ್ಲಿ | ಅನಿರುದ್ಧ ಯೋಷಾ |
| ಅಂತಹ ಪತ್ನಿಯ ಉಪಸ್ಥದಲ್ಲಿ | ಅನಿರುದ್ಧನಾರಾಯಣ 'ಉಪಸ್ಥ' |
| ಅಂತಹ ಪತಿಪತ್ನಿಯರ ಸಂಭಾಷಣೆಯಲ್ಲಿ | ಅನಿರುದ್ಧವಾಸುದೇವ 'ಉಪಮಂತ್ರಣ' |
| ಅಂತಹ ಪತ್ನಿಯ ಯೋನಿಯಲ್ಲಿ | ಅನಿರುದ್ಧಸಂಕರ್ಷಣ 'ಯೋನಿ' |
| ಯೋನಿಯೊಳಗೆ ನಡೆಯುವ ಸುರತ ವ್ಯಾಪಾರದಲ್ಲಿ | ಅನಿರುದ್ಧಪ್ರದ್ಯುಮ್ನ 'ಅಂತಃಕರಣ' |
| ಸುರತದಿಂದ ಉಂಟಾಗುವ ಆನಂದದಲ್ಲಿ | ಅನಿರುದ್ಧಅನಿರುದ್ಧ 'ಅಭಿನಂದ' |
| ಊಟದಲ್ಲಿ ತೊಡಗಿದ ವ್ಯಕ್ತಿಯಲ್ಲಿ | ಸಂಕರ್ಷಣ, ಪ್ರದ್ಯುಮ್ನ |
| ವಾಹನವನ್ನು ಏರಿದವನಲ್ಲಿ, ಪಾದರಕ್ಷಾ ಧಾರಕನಲ್ಲಿ | ಸಂಕರ್ಷಣ, ಪ್ರದ್ಯುಮ್ನ |
| ಗರ್ಭಿಣಿಯಲ್ಲಿ 'ಯೋನಿಶುದ್ಧಿ' ಕಾರಕನಾಗಿ | ವಾಸುದೇವ |
| ಗರ್ಭದಲ್ಲಿ ಶರೀರ ನಿರ್ಮಾತೃ ಆಗಿ | ಸಂಕರ್ಷಣ |

| | |
|---|---|
| ಗರ್ಭದಿಂದ ಮಗುವನ್ನು ಹೊರ ಹೊಮ್ಮಿಸುವವನಾಗಿ | ಪ್ರದ್ಯುಮ್ನ |
| ಗರ್ಭದಲ್ಲಿ ಧಾರಣ ಪೋಷಣೆಗಳ ನಿರ್ವಾಹಕನಾಗಿ | ಅನಿರುದ್ಧ |



## ಶ್ರೀ ಹರಿಕಥಾಮೃತಸಾರದಲ್ಲಿ ಕವಚಸ್ತೋತ್ರ

ತಂದೆತಾಯ್ಗಳು ತಮ್ಮ ಶಿಶುವಿಗೆ
ಬಂದ ಭಯಗಳ ಪರಿಹರಿಸಿ ನಿಜ—
ಮಂದಿರದಿ ಬೇಡಿದುದನಿತ್ತಾದರಿಸುವಂದದಲಿ ।
ಹಿಂದೆ ಮುಂದೆಡಬಲದಿ ಒಳಹೊರ-
ಗಿಂದಿರೇಶನು ತನ್ನವರನೊ—
ದೆಂದು ಸಲಹುವನಾಗಸದವೋಲೆತ್ತ ನೋಡಿದರು ॥

ಒಡಲನೆಳಲಂದದಲಿ ಹರಿ ನ—
ಮ್ಮೊಡನೆ ತಿರುಗುವನೊಂದರಕ್ಷಣ
ಬಿಡದೆ ಬೆಂಬಲನಾಗಿ ಭಕ್ತಾಧೀನನೆಂದೆನಿಸಿ ।
ತಡೆವ ದುರಿತೌಘಗಳ ಕಾಮದ
ಕೊಡುವ ಸಕಲೇಷ್ಟಗಳ ಸಂತತ
ನಡೆವ ನಮ್ಮಂದದಲಿ ನವಸುವಿಶೇಷಸನ್ನಿಹಿಪ ।

—ಕರುಣಾಸಂಧಿ—24. 25

# ಋಗ್ವೇದದಲ್ಲಿ ಕವಚಮಂತ್ರ

ಸವಿತಾ ಪಶ್ಚಾತಾತ್ ಸವಿತಾ ಪುರಸ್ತಾತ್
ಸವಿತೋತ್ತರಾತ್ತಾತ್ ಸವಿತಾಧರಾತ್ತಾತ್ ।

ಸವಿತಾ ನಃ ಸುವತು ಸರ್ವತಾತಿಂ
ಸವಿತಾ ನೋ ರಾಸತಾಂ ದೀರ್ಘಮಾಯುಃ ॥

ಜಗತ್ತನ್ನು ನಿರ್ಮಿಸುವ ಪ್ರಯುಕ್ತ 'ಸವಿತೃ' ಎನಿಸುವ ಭಗವಂತನು ಪಶ್ಚಿಮದಲ್ಲಿ ಇರುವನು. ಪೂರ್ವದಲ್ಲಿ ಇರುವನು. ಉತ್ತರದಲ್ಲಿ ಇರುವನು. [ದಕ್ಷಿಣದಲ್ಲಿ ಇರುವನು] ಕೆಳಗೆ [ಹಾಗೂ ಮೇಲೆ] ಇರುವನು. ಹೀಗೆ ಎಲ್ಲೆಡೆ ಇರುವ ಭಗವಂತನು ನಮ್ಮ ಎಲ್ಲ ಅಭೀಷ್ಟಗಳನ್ನು ಪೂರೈಸಲಿ. ನಮಗೆ ದೀರ್ಘವಾದ ಆಯುಷ್ಯವನ್ನು ಕರುಣಿಸಲಿ.

ಆಶೀರ್ವಾದದ ಮಂತ್ರಗಳಲ್ಲಿ ಒಂದಾಗಿ ಪಠಿಸಲ್ಪಡುವ ಈ ಮಂತ್ರವು ಋಗ್ವೇದದಲ್ಲಿ [10-36-14] ಉಲ್ಲೇಖಿಸಲ್ಪಡುವ 'ಕವಚಮಂತ್ರ'.

# ಅನುಸಂಧಾನದಲ್ಲಿ ಅಳವಡಿಸಿಕೊಳ್ಳಲೇಬೇಕಾದ ಕವಚಸ್ತೋತ್ರ

**ಆಸೀನಸ್ಯ ಶಯಾನಸ್ಯ ತಿಷ್ಠತೋ ವ್ರಜತೋಽಪಿ ವಾ ।**
**ರಮಸ್ವ ಪುಂಡರೀಕಾಕ್ಷ ಹೃದಯೇ ಮಮ ಸರ್ವದಾ ॥**

ಹೇ ಪುಂಡರೀಕಾಕ್ಷ! ನಾನು ಕುಳಿತಿರುವಾಗ, ಮಲಗಿರುವಾಗ, ನಿಂತಿರುವಾಗ, ನಡೆದಾಡುತ್ತಿರುವಾಗ – ಹೀಗೆ ಏನನ್ನೇ ನಡೆಸುತ್ತಿರುವಾಗಲೂ ಸದಾ ನನ್ನ ಎದೆಯಲ್ಲಿ ನಲಿದಾಡುತ್ತಿರು.

**ಸರ್ವಗಶ್ಚೈವ ಸರ್ವಾತ್ಮಾ ಸರ್ವಾವಸ್ಥಾಸು ಚಾಚ್ಯುತ ।**
**ರಮಸ್ವ ಪುಂಡರೀಕಾಕ್ಷ ನೃಸಿಂಹ ಹೃದಯೇ ಮಮ ॥**

ಹೇ ಅಚ್ಯುತ! ನರಸಿಂಹ! ನೀನು ಎಲ್ಲ ದೇಶ ಕಾಲಗಳಲ್ಲಿ ಇರುವವನು. ಎಲ್ಲರಿಗೂ ಒಡೆಯನಾಗಿರುವವನು; ಅಂತರ್ಯಾಮಿಯಾಗಿರುವವನು. ಅಂತಹ ನೀನು ಎಚ್ಚರ, ಕನಸು, ನಿದ್ರೆ, ಬಡತನ, ಸಿರಿತನ, ಮಾನ, ಅಪಮಾನ ಮುಂತಾದ ಎಲ್ಲ ಅವಸ್ಥೆಗಳಲ್ಲೂ ನನ್ನ ಎದೆಯಲ್ಲಿ ನಲಿದಾಡುತ್ತಿರು.

ಶ್ರೀಮಧ್ವಾಚಾರ್ಯರು ತಮ್ಮ ಕೃಷ್ಣಾಮೃತಮಹಾರ್ಣವದಲ್ಲಿ (185, 186) ಉಲ್ಲೇಖಿಸಿರುವ ಪುರಾಣದ ಈ ಎರಡು ಪದ್ಯಗಳ ಪೈಕಿ ಮೊದಲ ಪದ್ಯದಲ್ಲಿ ಬೇರೆ ಬೇರೆ ಚಟುವಟಿಕೆಯನ್ನು ನಡೆಸುವಾಗ, ಎರಡನೇ ಪದ್ಯದಲ್ಲಿ ಬೇರೆ ಬೇರೆ ಅವಸ್ಥೆಗೊಳಗಾಗುವಾಗ ಸಂರಕ್ಷಿಸಲು ಭಗವಂತನಲ್ಲಿ ಪ್ರಾರ್ಥಿಸಲಾಗಿದೆ.

ಸದಾ ನಲಿದಾಡುತ್ತಲೇ ಇರುವ ಭಗವಂತನಲ್ಲಿ ನನ್ನ ಹೃದಯದಲ್ಲಿ ನಲಿದಾಡುತ್ತಿರಲು ಕೇಳಿಕೊಳ್ಳುವುದರ ಆಂತರ್ಯ ಅವನು ಸರ್ವದಾ ನಲಿದಾಡುತ್ತಿರುವನೆಂಬ ಅನುಸಂಧಾನವನ್ನು ತಂದುಕೊಡಬೇಕೆಂಬುದರ ಜೊತೆಗೆ, ವಿಶೇಷವಾಗಿ ನನ್ನ ಪಾಲಿಗೆ ನಲಿದಾಡುವವನಾಗಿ, ಆ ಪ್ರಯುಕ್ತ ನನ್ನಲ್ಲೂ ಸುಖ, ಸಂತಸವನ್ನುಂಟು ಮಾಡು; ಇದಕ್ಕೆ ಪ್ರತಿರೋಧಕಗಳಾದ ಕ್ಲೇಶತಾಪಗಳನ್ನೂ, ದುಃಖದುಮ್ಮಾನಗಳನ್ನೂ ದೂರ ಮಾಡು ಎಂದು ಬೇಡಿಕೊಳ್ಳುವುದು.

ಯಾವಾಗಲೂ ಕವಚದಂತೆ ಸಂರಕ್ಷಕನಾಗಿರಬೇಕೆಂಬ ಬಿನ್ನಹದಲ್ಲಿಯೇ ಪರ್ಯವಸಾನಗೊಳ್ಳುವ ಬೇಡಿಕೆಯ ಈ ಎರಡು ಪದ್ಯಗಳು ಸಾಧಕರು ಬಳಸಿಕೊಳ್ಳಲೇಬೇಕಾದ ಪುಟ್ಟ 'ಕವಚಸ್ತೋತ್ರ'.

...O...